# ಶ್ರೀ ವಾದೀಂದ್ರತೀರ್ಥ

ವಿರಚಿತ

# ಭೂಗೋಲಮ್

## (ಸಮಗ್ರ ಗ್ರಂಥ ಕನ್ನಡಾನುವಾದ ಸಹಿತ)

ಸಂಪಾದಕರು ಹಾಗೂ ಅನುವಾದಕರು

ಶ್ರೀರಾಮಚಂದ್ರಾಚಾರ್ಯ ಪುರೋಹಿತ



ಪ್ರಕಾಶಕರು

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

|| ಶ್ರೀಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||



ಶ್ರೀರಘುನಂದನ ರಾಘವೇಂದ್ರ ಮಾಲಾ - ೩೭

ಪ್ರಧಾನ ಸಂಪಾದಕರು

**ರಾಜಾ. ಎಸ್. ರಾಜಗೋಪಾಲಾಚಾರ್ಯ, ಮಂತ್ರಾಲಯ**


ಸಂಪಾದಕರು ಹಾಗೂ ಅನುವಾದಕರು

**ಶ್ರೀರಾಮಚಂದ್ರಾಚಾರ್ಯ ಪುರೋಹಿತ**

ದ್ವೈತವೇದಾಂತ ವಿದ್ವಾನ್, ಎಂ.ಎ.

ಸಂಸ್ಕೃತ ಪ್ರಾಧ್ಯಾಪಕ

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು

ಉಜಿರೆ, ದಕ್ಷಿಣಕನ್ನಡ



ಪ್ರಕಾಶಕರು

**ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ**

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

ಶ್ರೀವಾದೀಂದ್ರತೀರ್ಥಕೃತ

# ॥ ಭೂಗೋಲಮ್ ॥

## ಪ್ರಥಮೋಽಧ್ಯಾಯಃ

ಪಂಚಾಶತ್ಕೋಟಿವಿಸ್ತೀರ್ಣಂ ಭೂಮಂಡಲಮುದೀರಿತಮ್ ।
ತಸ್ಯಾಪಿ ಮಧ್ಯತಃ ಸಂತಿ ಸಪ್ತದ್ವೀಪಾಃ ಸಸಾಗರಾಃ ॥ ೧ ॥

ಜಂಬೂಪ್ಲಕ್ಷಾಹ್ವಯೌ ದ್ವೀಪೌ ಶಾಲ್ಮಲಿಶ್ಚ ತಥಾಪರಃ ।
ಕುಶಃ ಕ್ರೌಂಚಸ್ತಥಾ ಶಾಕಃ ಪುಷ್ಕರಶ್ಚೇತಿ ಸಪ್ತಮಃ ॥ ೨ ॥

ಲವಣೇಕ್ಷು ಸುರಾಸರ್ಪಿದಧಿಕ್ಷೀರಶುಭೋದಕೈಃ ।
ಸಾಗರೈಸ್ಸಪ್ತಭಿಸ್ತೇ ತು ಸಮಮಾನೈ ಸಮಾವೃತಾಃ ॥ ೩ ॥

[ಕ]ಭೂಮಂಡಲವು ಐವತ್ತು ಕೋಟಿ ಯೋಜನ ವಿಸ್ತಾರವುಳ್ಳದ್ದೆಂದು ಹೇಳಲ್ಪಟ್ಟಿದೆ. ಅದರ ಮಧ್ಯದಲ್ಲಿ ಸಮುದ್ರಗಳಿಂದ ಸಹಿತವಾದ ಏಳು ದ್ವೀಪಗಳು ಇವೆ ॥ ೧ ॥ ಜಂಬೂದ್ವೀಪ, ಪ್ಲಕ್ಷದ್ವೀಪ, ಶಾಲ್ಮಲೀದ್ವೀಪ, ಕುಶದ್ವೀಪ, ಕ್ರೌಂಚದ್ವೀಪ, ಶಾಕದ್ವೀಪ ಹಾಗೂ ಪುಷ್ಕರದ್ವೀಪಗಳೆಂದು ಏಳು ದ್ವೀಪಗಳು ॥ ೨ ॥ ಲವಣಸಮುದ್ರ, ಇಕ್ಷುಸಮುದ್ರ, ಸುರಾಸಮುದ್ರ, ಘೃತಸಮುದ್ರ, ದಧಿಸಮುದ್ರ, ಕ್ಷೀರಸಮುದ್ರ ಹಾಗೂ ಶುದ್ಧೋದಕಸಮುದ್ರ ಎಂದು ಏಳು ಸಮುದ್ರಗಳು[ಖ] ಏಳು ದ್ವೀಪಗಳ ಸಮಾನ ಅಳತೆಯುಳ್ಳವುಗಳಾಗಿ ಸುತ್ತುವರೆದಿವೆ ॥ ೩ ॥

---

[ಕ]ಭೂಲೋಕವು ಪೃಥ್ವೀ, ತಮಸ್ಸು, ಘನೋದಕ ಈ ಮೂರು ವಿಭಾಗಗಳು ಸೇರಿ ಐವತ್ತು ಕೋಟಿ ಯೋಜನ ವಿಸ್ತೀರ್ಣವುಳ್ಳದ್ದು. ಪೃಥ್ವಿಯ ಭಾಗವು ೭,೧೪೨೮೫೭೧ ಯೋಜನವುಳ್ಳದ್ದು. ತಮೋಭಾಗವು ಪೃಥ್ವಿಯ ಎರಡು ಪಟ್ಟು ಅಂದರೆ ೧೪,೨೮೫೭೧೪೨ ಯೋಜನವುಳ್ಳದ್ದು. ಘನೋದಕಭಾಗವು ಅದರ ಎರಡು ಪಟ್ಟು ಅಂದರೆ ೨೮,೫೭೧೪೨೮೪ ಯೋಜನವುಳ್ಳದ್ದು.

[ಖ]ಸಪ್ತದ್ವೀಪಗಳನ್ನು ಸಪ್ತಸಾಗರಗಳು ಸುತ್ತುವರೆದಿವೆ. ಜಂಬೂದ್ವೀಪವು ೧ ಲಕ್ಷ ಯೋಜನ ವಿಸ್ತೀರ್ಣ ಅದನ್ನಾವರಿಸಿದ ಲವಣಸಮುದ್ರವೂ ೧ ಲಕ್ಷ ಯೋಜನ ವಿಸ್ತೀರ್ಣ. ಪ್ಲಕ್ಷದ್ವೀಪವು ೨ ಲಕ್ಷ ವಿಸ್ತೀರ್ಣವಾದರೆ ಇಕ್ಷುಸಮುದ್ರವೂ ೨ ಲಕ್ಷ ವಿಸ್ತೀರ್ಣವುಳ್ಳದ್ದು. ಶಾಲ್ಮಲೀದ್ವೀಪವು ೪ ಲಕ್ಷ

[1]ದ್ವೀಪಾ ಜಂಬ್ವಾದಯಃ ಪೂರ್ವಪೂರ್ವಸ್ಮಾದ್ ದ್ವಿಗುಣೋತ್ತರಾಃ ।
ಆಗ್ನೀಧ್ರಶ್ಚೇಧ್ಮಜಿಹ್ವಶ್ಚ ಯಜ್ವಬಾಹುರನಂತರಮ್ ॥ ೪ ॥

ಹಿರಣ್ಯರೇತಾ ಅಪರೋ ಘೃತಪೃಷ್ಠಸ್ತು ಪಂಚಮಃ ।
ಮೇಧಾತಿಥಿರ್ವೀತಿಹೋತ್ರಃ ಪ್ರಿಯವ್ರತಸುತಾ ಇಮೇ ॥ ೫ ॥

ಕ್ರಮೇಣ ಸಪ್ತದ್ವೀಪಾನಾಮಧಿಪಾಃ ಸಮುದೀರಿತಾಃ ।
ಜಂಬೂದ್ವೀಪಃ ಸಮಸ್ತಾನಾಂ ಏತೇಷಾಂ ಮಧ್ಯತಃ ಸ್ಥಿತಃ ॥ ೬ ॥

ಜಂಬೂ ಮೊದಲಾದ ದ್ವೀಪಗಳು ಪೂರ್ವಪೂರ್ವದ್ವೀಪಗಳಿಗಿಂತ ಉತ್ತರೋತ್ತರದ್ವೀಪಗಳು ಎರಡು ಪಟ್ಟು ಪ್ರಮಾಣವುಳ್ಳವುಗಳು.[ಗ] ಆಗ್ನೀಧ್ರ, ಇಧ್ಮಜಿಹ್ವ, ಯಜ್ವಬಾಹು, ಹಿರಣರೇತಸ್, ಘೃತಪೃಷ್ಠ, ಮೇಧಾತಿಥಿ, ವೀತಿಹೋತ್ರ ಎಂಬ ಏಳು ಜನ ಪ್ರಿಯವ್ರತನ ಪುತ್ರರು ಕ್ರಮವಾಗಿ ಈ ಏಳು ದ್ವೀಪಗಳ ಅಧಿಪತಿಗಳೆಂದು ಹೇಳಲ್ಪಟ್ಟಿರುವರು. ಈ ಎಲ್ಲ ದ್ವೀಪಗಳ ಮಧ್ಯದಲ್ಲಿ ಜಂಬೂದ್ವೀಪ[ಘ] ಇರುತ್ತದೆ. ಇದು ವರ್ತುಲಾಕಾರವಾಗಿದೆ[ಙ] ॥ ೩, ೪, ೫ ॥

---

ವಿಸ್ತೀರ್ಣವುಳ್ಳದ್ದಾದರೆ ಅದನ್ನು ಸುತ್ತುವರೆದ ಸುರಾಸಮುದ್ರದ ವಿಸ್ತೀರ್ಣವೂ ೪ ಲಕ್ಷ ಯೋಜನವುಳ್ಳದ್ದು. ಕುಶದ್ವೀಪವು ೮ ಲಕ್ಷ ಯೋಜನ ವಿಸ್ತೀರ್ಣವಾದರೆ ಅದನ್ನು ಸುತ್ತುವರೆದ ಘೃತಸಮುದ್ರವು ೮ ಲಕ್ಷ ಯೋಜನವುಳ್ಳದ್ದು. ಕ್ರೌಂಚದ್ವೀಪವು ೧೬ ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದಾದರೆ, ಅದನ್ನು ಸುತ್ತುವರೆದ ದಧಿಸಮುದ್ರ ೧೬ ಲಕ್ಷ ಯೋಜನವುಳ್ಳದ್ದು. ಶಾಕದ್ವೀಪವು ೩೨ ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದಾದರೆ ಅದನ್ನು ಸುತ್ತುವರೆದ ಕ್ಷೀರಸಮುದ್ರವೂ ಸಹ ೩೨ ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದು. ಪುಷ್ಕರದ್ವೀಪವು ೬೪ ಯೋಜನವುಳ್ಳದ್ದಾದರೆ, ಅದನ್ನು ಸುತ್ತುವರೆದ ಶುದ್ಧೋದಕಸಮುದ್ರವೂ ೬೪ ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದು.

1 ಪ್ಲಕ್ಷಾದಿದ್ವೀಪಷಟ್ಕಂ ತು ಕ್ರಮಾದ್ ದ್ವಿಗುಣಿತಂ ಮತಂ ।
ಪರಿತೋ ವಲಯಾಕಾರಾಃ ಸಪ್ತಾನಾಂ ಸಪ್ತಸಿಂಧವಃ ॥ - ವಿಷ್ಣುರಹಸ್ಯಂ

[ಗ]ಜಂಬೂದ್ವೀಪದ ಎರಡರಷ್ಟು ಪ್ಲಕ್ಷದ್ವೀಪ, ಅದರ ಎರಡರಷ್ಟು ಶಾಲ್ಮಲೀ ದ್ವೀಪ, ಅದರ ಎರಡರಷ್ಟು ಕುಶದ್ವೀಪ, ಅದರ ಎರಡರಷ್ಟು, ಕ್ರೌಂಚದ್ವೀಪ, ಅದರ ಎರಡರಷ್ಟು ಶಾಕದ್ವೀಪ, ಅದರ ಎರಡರಷ್ಟು ಪುಷ್ಕರದ್ವೀಪ ಹೀಗೆ ಕ್ರಮವಾಗಿ ೧ ಲಕ್ಷ, ೨ ಲಕ್ಷ, ೪ ಲಕ್ಷ, ೮ ಲಕ್ಷ, ೧೬ ಲಕ್ಷ ಹಾಗೂ ೩೨ ಲಕ್ಷ, ೬೪ ಲಕ್ಷ ಹೀಗೆ ದ್ವಿಗುಣಿತವಾಗಿವೆ.

[ಘ]ಇದು ಮೇರುಪರ್ವತದ ಸುತ್ತಲೂ ಇದೆ ವರ್ತುಲಾಕಾರವಾಗಿದೆ. ಇದನ್ನು ಲವಣಸಮುದ್ರವು ಸುತ್ತಿಕೊಂಡಿದೆ. ಸೃಷ್ಟಿಯ ಆದಿಯಲ್ಲಿ ಪ್ರಿಯವ್ರತ ಆಗ್ನೀಧ್ರ ಇದನ್ನು ಪಾಲಿಸುತ್ತಿದ್ದ. ಆತನು ತನ್ನ ನಂತರದಲ್ಲಿ ಈ ಜಂಬೂದ್ವೀಪವನ್ನು ಒಂಭತ್ತು ಖಂಡಗಳನ್ನಾಗಿ ಮಾಡಿ ತನ್ನ ಒಂಭತ್ತು ಮಂದಿ ಮಕ್ಕಳಿಗೂ ಹಂಚಿಕೊಟ್ಟ. ಅವರು ಪಾಲಿಸಿದ ಭೂಭಾಗಗಳು ಅವರವರ ಹೆಸರುಗಳಿಂದಲೇ ಪ್ರಸಿದ್ಧವಾಗಿವೆ. ಈ ದ್ವೀಪದಲ್ಲಿ ದೊಡ್ಡದಾದ ಒಂದು ಜಂಬೂವೃಕ್ಷವಿದೆ. ಈ ಕಾರಣದಿಂದಲೇ ಈ ದ್ವೀಪಕ್ಕೆ ಜಂಬೂದ್ವೀಪ ಎಂದು ಹೆಸರಾಯಿತು. (ಮಹಾಭಾರತ, ಭಾಗವತ, ವಿಷ್ಣುಪುರಾಣ)

[ಙ] ಯೋ ವಾ ಅಯಂ ದ್ವೀಪಃ ಕುವಲಯಕಮಲಕೋಶಾಭ್ಯಂತರಕೋಶಃ ।
ನಿಯುತಯೋಜನ ವಿಶಾಲಃ ಸಮವರ್ತುಲೋ ಯಥಾ ಪುಷ್ಕರಪತ್ರಮ್ - ಭಾಗವತ-೫-೧೬-೫

ಲಕ್ಷಯೋಜನವಿಸ್ತೀರ್ಣಃ ಮೇರುಸ್ತಸ್ಯಾಪಿ ಮಧ್ಯತಃ ।
[2]ಚತುರಾಶೀತಿಸಾಹಸ್ರೈರ್ಯೋಜನೈಸ್ತಸ್ಯ ಚೋಚ್ಛ್ರಯಃ ॥ ೭ ॥

ಪ್ರವಿಷ್ಟ ಷೋಡಶಾಧಸ್ತಾತ್ ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ ।
ಮೂಲೇ ಷೋಡಶಸಾಹಸ್ರವಿಸ್ತಾರಸ್ತಸ್ಯ ಭೂಭೃತಃ ॥ ೮ ॥

ಭೂಪದ್ಮಸ್ಯಾಸ್ತಿ ಶೈಲೋಽಸೌ ಕರ್ಣಿಕಾಕಾರಸಂಸ್ಥಿತಃ ।
ದಕ್ಷಿಣಾಂಬುಧಿತೀರಸ್ಥಂ ಭಾರತಂ ಪ್ರಥಮಂ ಸ್ಮೃತಮ್ ॥ ೯ ॥

ಇಂತಹ ಜಂಬೂದ್ವೀಪದ ಮಧ್ಯದಲ್ಲಿ ಲಕ್ಷ ಯೋಜನ ವಿಸ್ತೀರ್ಣವುಳ್ಳ ಮೇರು ಎಂಬ ಪರ್ವತವಿದೆ. ಭೂಮಿಯ ಮೇಲೆ ೮೪ ಯೋಜನದಷ್ಟು ಎತ್ತರವಾಗಿದೆ ॥ ೭ ॥ ಭೂಮಿಯ ಒಳಗೆ ೧೬,೦೦೦ ಯೋಜನದಷ್ಟು ಅದರ ಮೂಲಭಾಗವಿದೆ. ಭೂಮಿಯ ಮೇಲೆ ಅದರ ವಿಸ್ತೀರ್ಣ ೧೬,೦೦೦ ಯೋಜನವಿದ್ದು ಮೇಲ್ಭಾಗ ೩೨,೦೦೦ ವಿಸ್ತೀರ್ಣವುಳ್ಳದ್ದಾಗಿದೆ ॥ ೮ ॥ ಈ ಪರ್ವತವೂ ಭೂಪದ್ಮದಂತಿದ್ದು, ಕರ್ಣಿಕಾಕಾರವನ್ನು ಹೊಂದಿದೆ. ಈ ಮೇರುವಿನ ದಕ್ಷಿಣದ ಕಡೆಗೆ ದಕ್ಷಿಣಸಮುದ್ರತೀರದಲ್ಲಿ (ಭಾರತ) ಭರತಖಂಡವಿದೆ.

ಕಿಂಪುರುಷಂ ಹರಿವರ್ಷಂ ಮೇರೋರ್ದಕ್ಷಿಣತಃ ಸ್ಥಿರಮ್ ।
ರಮ್ಯಂ ಹಿರಣ್ಮಯಂ ಚೈವ ಕುರವರ್ಷಂ ತಥೋತ್ತರೇ ॥ ೧೦ ॥

ಮೇರೋಃ ಪೂರ್ವೇಣ ಭದ್ರಾಶ್ವಂ ಕೇತುಮಾಲಂ ತು ಪಶ್ಚಿಮೇ ।
ಇಲಾವೃತಂ ತು ತನ್ಮಧ್ಯೇ ಮೇರುಗರ್ಭಮುದೀರಿತಮ್ ॥ ೧೧ ॥

ನಾಭಿ ಕಿಂಪುರುಷಶ್ಚೈವ ಹರಿವರ್ಷ ಇಲಾವೃತಃ ।
ರಮ್ಯೋ ಹಿರಣ್ಮಯಃ ಷಷ್ಠ ಕುರುರ್ಭದ್ರಾಶ್ಚ ಏವ ಚ ॥ ೧೨ ॥

ಕೇತುಮಾಲ ಇತಿ ಖ್ಯಾತಾಃ ಆಗ್ನೀಧ್ರತನಯಾ ನವ ।
ವರ್ಷಾಣಾಂ ಭಾರತಾದ್ಯಾನಾಂ ಪಾಲಕಾಃ ಸಮುದೀರಿತಾಃ ॥ ೧೩ ॥

ಇಂತಹ ಮೇರುವಿನ ದಕ್ಷಿಣದಲ್ಲಿ ಭರತಖಂಡ, ಕಿಂಪುರುಷಖಂಡ, ಹರಿವರ್ಷಖಂಡ, ಉತ್ತರದಲ್ಲಿ ರಮ್ಯಕ, ಹಿರಣ್ಮಯ ಹಾಗೂ ಕುರುಖಂಡಗಳಿವೆ ॥ ೧೦ ॥ ಮೇರುವಿನ ಪೂರ್ವದಲ್ಲಿ ಭದ್ರಾಶ್ವಖಂಡ, ಪಶ್ಚಿಮದಲ್ಲಿ ಕೇತುಮಾಲಖಂಡ

2 ಭೂಲೋಕಾದೂರ್ಧ್ವತೋ ಮೇರುಃ ಛತ್ರಾಕಾರಃ ಸುರಾಲಯಃ ।
ಚತುರಾಶೀತಿಸಾಹಸ್ರೋ ನಾನೋದ್ಯಾನವಿರಾಜಿತಃ ॥ - ವಿಷ್ಣುರಹಸ್ಯಂ

ಈ ಎಲ್ಲ ಖಂಡಗಳ ಮಧ್ಯದಲ್ಲಿ ಮೇರುಪರ್ವತವಿದೆ ॥ ೧೧ ॥ ಈ ಒಂಭತ್ತು ಖಂಡಗಳನ್ನು ಕ್ರಮವಾಗಿ ಆಗ್ನೀಧ್ರನ ಮಕ್ಕಳಾದ [ಚ]ನಾಭಿ, [ಛ]ಕಿಂಪುರುಷ, [ಜ]ಹರಿವರ್ಷ [ಝ]ಇಲಾವೃತ, [ಞ]ರಮ್ಯ, [ಟ]ಹಿರಣ್ಮಯ, [ಠ]ಕುರು, [ಡ]ಭದ್ರಾಶ್ವ, [ಢ]ಕೇತುಮಾಲ ಮೊದಲಾದ ಅದೇ ಹೆಸರಿನ ರಾಜರುಗಳು ಅಧಿಪತಿಗಳಾಗಿದ್ದರು.

**ಧನುರ್ವತ್ ಸಂಸ್ಥಿತೇ ಜ್ಞೇಯೇ ವರ್ಷೇ ತದ್ದಕ್ಷಿಣೋತ್ತರೇ ।**
**ದೀರ್ಘಾಣಿ ತತ್ರ ಚತ್ವಾರಿ ಚತುರಸ್ರಮಿಲಾವೃತಮ್ ॥ ೧೪ ॥**

**ನವಸಾಹಸ್ರವಿಸ್ತೀರ್ಣಂ ದಾಕ್ಷಿಣಾತ್ಯಂ ತಥೋತ್ತರಮ್ ।**
**ವರ್ಷಂ ಪ್ರತ್ಯೇಕಮಾಖ್ಯಾತಂ ಚತುರ್ದಿಕ್ಷ್ವಪಿ ಮೇರುತಃ ॥ ೧೫ ॥**

**ನವಸಾಹಸ್ರವಿಸ್ತೀರ್ಣಂ ಇಲಾವೃತಮುದೀರಿತಮ್ ।**
**ಚತುಸ್ತ್ರಿಂಶತ್ಸಹಸ್ರಾಣಿ ದಕ್ಷಿಣೋತ್ತರಮಾಯತೇ ॥ ೧೬ ॥**

---

[ಚ]**ನಾಭಿ** – ಇವನು ಆಗ್ನೀಧ್ರನ ಹಿರಿಯ ಮಗ. ಮೇರುಪುತ್ರಿಯಾದ ಮೇರುದೇವಿಯನ್ನು ವಿವಾಹವಾಗಿ ಋಷಭದೇವನನ್ನು ಪಡೆದ. ಇವನಾಳಿದ ಭೂಭಾಗಕ್ಕೆ ಅಜನಾಭ ಅಥವಾ ಭಾರತವರ್ಷ ಎಂದು ಹೆಸರು. (ಭಾಗವತ)

[ಛ]**ಕಿಂಪುರುಷ – ಆಗ್ನೀಧ್ರನ ಮಗ** – ಮೇರುವಿನ ಮಗಳಾದ ಪೃಥುರೂಪಿಯನ್ನು ಮದುವೆಯಾಗಿ ಕಿಂಪುರುಷಖಂಡವನ್ನಾಳಿದವ.

[ಜ]**ಹರಿವರ್ಷ** – ಜಂಬೂದ್ವೀಪವನ್ನು ಒಂಭತ್ತು ಖಂಡಗಳಾಗಿ ವಿಭಾಗ ಮಾಡಿದ ಮೇಲೆ ಹೇಮಕೂಟ ನಿಷಧ ಪರ್ವತಗಳ ನಡುವಣ ಭೂಭಾಗ ಈತನ ಪಾಲಿಗೆ ಬಂತು. ಇದೇ ಹರಿವರ್ಷವಾಯಿತು.

[ಝ]**ಇಲಾವೃತ** – ಅಗ್ನೀಧ್ರನ ಮಗ. ಇವನಾಳಿದ ಖಂಡವು ನೀಲ, ನಿಷಧ, ಹೇಮಕೂಟ, ಹಿಮವತ್ಪರ್ವತಗಳ ನಡುವೆ ಚತುರಸ್ರಾಕಾರವಿದೆ. ಅರ್ಜುನನು ಈ ಖಂಡವನ್ನು ಜಯಿಸಿದ - ಮಹಾಭಾರತ.

[ಞ]**ರಮ್ಯ** – ರಮ್ಯಕ ಎಂದೂ ಇವನ ಹೆಸರು. ಪೂರ್ವ-ಪಶ್ಚಿಮ ಸಮುದ್ರಗಳ ನಡುವೆ ಶ್ವೇತ, ನೀಲಗಳೆಂಬ ಪರ್ವತಗಳ ಮಧ್ಯೆ ಈ ಖಂಡವಿದೆ.

[ಟ]**ಹಿರಣ್ಮಯ** – ಆಗ್ನೀಧ್ರನಿಂದ ಜಂಬೂದ್ವೀಪವನ್ನು ವಿಭಾಗ ಮಾಡಿದಾಗ ದೊರೆತ ಶ್ವೇತ ಹಾಗೂ ಶೃಂಗವಂತವೆಂಬ ಪರ್ವತಗಳ ನಡುವಣ ಭಾಗವು ಈತನ ಪಾಲಿಗೆ ಬಂತು.

[ಠ]**ಕುರು** – ಆಗ್ನೀಧ್ರರಾಜನಿಂದ ಪೂರ್ವಚಿತ್ತಿ ಎಂಬ ಅಪ್ಸರೆಯಲ್ಲಿ ಹುಟ್ಟಿದ ಒಂಭತ್ತು ಮಕ್ಕಳಲ್ಲಿ ಏಳನೆಯವನು. ಮೇರುಪುತ್ರಿಯಾದ ನಾರಿಯೆಂಬುವಳನ್ನು ಮದುವೆಯಾಗಿದ್ದ.

[ಡ]**ಭದ್ರಾಶ್ವ** – ಭದ್ರಾಶ್ವಖಂಡದ ದೊರೆ. ಈತನ ಖಂಡವು ಪುಣ್ಯಶಾಲಿಗಳ ಭೋಗಸ್ಥಾನವಾಗಿದೆ. ಮೇರುಪರ್ವತದ ಪೂರ್ವಕ್ಕೆ ಈ ಖಂಡವಿದೆ.

[ಢ]**ಕೇತುಮಾಲ** – ಆಗ್ನೀಧ್ರನ ಮಗನಾದ ಇವನು ಮೇರುಪುತ್ರಿಯಾದ ದೇವವೀತಿಯನ್ನು ಮದುವೆಯಾಗಿದ್ದ. ಮಾಲ್ಯವತ್ಪರ್ವತ ಹಾಗೂ ಲವಣಸಮುದ್ರದ ನಡುವೆ ಇವನ ಖಂಡವಿದೆ.

[ಸ]ಈ ಇಲಾವೃತಖಂಡದ ದಕ್ಷಿಣೋತ್ತರಗಳು ಬಿಲ್ಲಿನಂತೆ ತೋರುತ್ತವೆ. ಈ ಖಂಡವು ಚತುರಸ್ರಾಕಾರದಲ್ಲಿದೆ. ಮೇರುವಿನಿಂದ ದಕ್ಷಿಣೋತ್ತರಗಳು ಪ್ರತ್ಯೇಕವಾಗಿ ೯,೦೦೦ ಯೋಜನ ವಿಸ್ತೀರ್ಣವುಳ್ಳವುಗಳಾಗಿವೆ. ದಕ್ಷಿಣೋತ್ತರಗಳ ಆಯಾಮವು ೩೪,೦೦೦ ಯೋಜನಗಳಷ್ಟಿವೆ.

ಈ ಇಳಾವೃತ ವರ್ಷದಲ್ಲಿ ಕೇವಲ ಸ್ತ್ರೀಯರೇ ಸದಾ ಸಂಚರಿಸುತ್ತಿರುತ್ತಾರೆ. [ಪ]ಭವಾನೀದೇವಿಯರ ಶಾಪದಿಂದ ಭೀತರಾಗಿ ಪುರುಷರಾರೂ ಇಲ್ಲ ಪ್ರವೇಶ ಮಾಡುವುದಿಲ್ಲ. ಇಲ್ಲಿ ಉಮಾಪತಿಯು ಸಂಕರ್ಷಣನಾಮಕ ಭಗವಂತನನ್ನು ಉಪಾಸನೆ ಮಾಡುತ್ತಾರೆ. ಈ ಖಂಡಕ್ಕೆ ನಾಲ್ಕೂ ದಿಕ್ಕುಗಳಲ್ಲಿಯೂ ಗಡಿಯಂತೆ ವಿಸ್ತಾರವಾದ ಪರ್ವತಗಳಿವೆ. [ಫ]ಪೂರ್ವದಲ್ಲಿ ಗಂಧಮಾದನ ಪರ್ವತ ದಕ್ಷಿಣದಲ್ಲಿ ನಿಷಧ ಪರ್ವತವು, ಪಶ್ಚಿಮದಲ್ಲಿ ಮಾಲ್ಯವಾನ್ ಪರ್ವತ, ಉತ್ತರದಲ್ಲಿ ನೀಲವೆಂಬ ಪರ್ವತ ಇವು ಗಡಿಪರ್ವತಗಳಾಗಿವೆ.

**ಏಕತ್ರಿಂಶತ್ಸಹಸ್ರಾಣಿ ಪೂರ್ವಪಶ್ಚಿಮತಃ ಸ್ಥಿತೇ ।**
**ಭದ್ರಾಶ್ವಕೇತುಮಾಲಾಖ್ಯೆ ಪೌರ್ವಪಾಶ್ಚಾತ್ಯವರ್ಷಕೇ ॥ ೧೭ ॥**

**ಹಿಮವಾನ್ ಹೇಮಕೂಟಶ್ಚ ನಿಷಧಶ್ಚಾಸ್ಯ ದಕ್ಷಿಣೇ ।**
**ನೀಲ ಶ್ವೇತಶ್ಚ ಶೃಂಗೀ ಚ ಉತ್ತರೆ ವರ್ಷಪರ್ವತಾಃ ॥ ೧೮ ॥**

**[3]ಲಕ್ಷಪ್ರಮಾಣೌ ದ್ವೌ ಮಧ್ಯೆ ದಶಹೀನಾಸ್ತಥಾಪರೆ ।***
**ಸಹಸ್ರದ್ವಿತಯೋಚ್ಛ್ರಾಯೌ ತಾವದ್ವಿಸ್ತಾರಿಣೌ ಚ ತೌ ॥ ೧೯ ॥**

ಇಳಾವೃತಖಂಡದ ಪೂರ್ವ-ಪಶ್ಚಿಮಗಳಲ್ಲಿ ಭದ್ರಾಶ್ವ ಹಾಗೂ ಕೇತುಮಾಲ ಎಂಬ ಖಂಡಗಳಿವೆ. ಪೂರ್ವದಲ್ಲಿ ಭದ್ರಾಶ್ವ ಖಂಡವು ಪೂರ್ವಲವಣಸಮುದ್ರದವರೆಗೆ ೩೧,೦೦೦ ಯೋಜನ ವಿಸ್ತೀರ್ಣವುಳ್ಳದ್ದಾಗಿದೆ. ಹಾಗೆಯೇ ಕೇತುಮಾಲ ಖಂಡವು ಪಶ್ಚಿಮದಲ್ಲಿ ಪಶ್ಚಿಮಲವಣಸಮುದ್ರದವರೆಗೆ ೩೧,೦೦೦ ಯೋಜನ ವಿಸ್ತೀರ್ಣವುಳ್ಳದ್ದಾಗಿದೆ ॥ ೧೭ ॥ ದಕ್ಷಿಣ ದಿಕ್ಕಿನಲ್ಲಿ ಹಿಮವಾನ್ ಹೇಮಕೂಟ ಹಾಗೂ ನಿಷಧ ಪರ್ವತಗಳಿವೆ. ಉತ್ತರದಲ್ಲಿ ನೀಲ ಶ್ವೇತ ಹಾಗೂ ಶೃಂಗವಾನ್ ಎಂಬ ಪರ್ವತಗಳಿವೆ ॥ ೧೮ ॥

---

ಸ **ಪರಿತಸ್ತು ಚತುಷ್ಕೋಣಂ ಇಲಾವೃತಮುದೀರಿತಮ್ ।**
**ಪ್ರತ್ಯೇಕಂ ತಚ್ಚತುರ್ದಿಕ್ಷು ನವಸಾಹಸ್ರವಿಸ್ತೃತಮ್ ॥** - ವಿಷ್ಣುರಹಸ್ಯಂ

ಪ **ಭವಾನೀಶಾಪತಸ್ತತ್ರ ಪುಮಾನ್ ನಾಭ್ಯೇತಿ ಕಶ್ಚನ ।** - ಶ್ರೀವಾದಿರಾಜರ ಭೂಗೋಲವರ್ಣನೆ

ಫ **ಮಾಲ್ಯವಾನ್ ಪಶ್ಚಿಮೇ ತತ್ರ ಪೂರ್ವತೋ ಗಂಧಮಾದನಃ** - ಶ್ರೀಸುಮತೀಂದ್ರರ ಭೂಗೋಲಸಂಗ್ರಹ

3 **ಜಂಬೂದ್ವೀಪಪ್ರಮಾಣೇನ ನಿಷಧಃ ಪರಿಕೀರ್ತಿತಃ ।**
**ತಸ್ಮಾಚ್ಚ ದಶಭಾಗೇನ ಹೇಮಕೂಟಃ ಪ್ರತೀಯತೇ ॥**

ಎಂಬ ವರಾಹಪುರಾಣದ ಈ ಮಾತೂ ಸಹ ಮೇಲಿನ ವಿಷಯಕ್ಕೆ ಸಂವಾದಿಯಾಗಿದೆ.

* ವಿಷ್ಣುಪುರಾಣದಿಂದ ಉದ್ಧೃತವಾದ ಶ್ಲೋಕವಿದು.

ನೀಲ ನಿಷಧ ಪರ್ವತಗಳು ಲಕ್ಷ ಯೋಜನ ವಿಸ್ತೀರ್ಣವುಳ್ಳವುಗಳಾಗಿವೆ. ಉಳಿದವುಗಳು ಅಂದರೆ ಹೇಮಕೂಟ, ಹಿಮವಾನ್, ಶ್ವೇತಪರ್ವತ' ಮತ್ತು ಶೃಂಗವಾನ್ ಪರ್ವತಗಳು ಕ್ರಮೇಣ ದಶಾಂಶತಃ ನ್ಯೂನಪ್ರಮಾಣವುಳ್ಳವುಗಳಾಗಿವೆ.

ವರ್ಷಾಣಾಂ ಭಾರತಾದ್ಯಾನಾಂ ಮರ್ಯಾದಾಗಿರಯಃ ಸ್ಮೃತಾಃ ।
ಆನೀಲನಿಷಧಾಯಾಮೌ ಮಾಲ್ಯವದ್ಗಂಧಮಾದನೌ ॥ ೨೦ ॥

ಕೇತುಮಾಲಾಖ್ಯಭದ್ರಾಶ್ವದ್ವೀಪಚ್ಛೇದಕಪರ್ವತೌ ।
ಸಹಸ್ರದ್ವಿತಯೋಚ್ಛ್ರಾಯೌ ತಾವದ್ವಿಸ್ತಾರಿಣೌ ಉಭೌ ॥ ೨೧ ॥

ಇಲಾವೃತಸ್ಯ ಮಧ್ಯೇಽಪಿ ಮೇರುವಿಷ್ಟಂಭಭೂಧರಾಃ ।
ಯೋಜನಾಯುತವಿಸ್ತಾರೋನ್ನಾಹಾಯತ್ತಾಶ್ಚತುರ್ದಶ ॥ ೨೨ ॥

ಪೂರ್ವೇಣ ಮಂದರೋ ನಾಮ ದಕ್ಷಿಣೆ ಮೇರುಮಂದರಃ ।
ಸುಪಾರ್ಶ್ವಃ ಪಶ್ಚಿಮೇ ಪಾರ್ಶ್ವೇ ಕುಮುದಶ್ಚೋತ್ತರೆ ಸ್ಮೃತಃ ॥ ೨೩ ॥

ತೇಷುಚೂತತರುರ್ಜಂಬೂ ಕಂದಂಬೋ ವಟ ಏವ ಚ ।
ಏಕಾದಶಶತಾಯಾಮಾಸ್ತಾವದ್ವಿಸ್ತೃತಶಾಖಿನಃ ॥ ೨೪ ॥

ಶತಯೋಜನವಿಸ್ತೀರ್ಣಾ ಹ್ರದಾಸ್ತೇಷು ವ್ಯವಸ್ಥಿತಾಃ ।
ಪಯೋಮಧ್ವಿಕ್ಷುರಸಮೃಷ್ಟತೋಂಯೇನ ಪೂರಿತಾಃ ॥ ೨೫ ॥

ಸಂಸ್ಪರ್ಶಮಾತ್ರತೋ ದಿವ್ಯದೇಹತಾಪಾದಕಾಃ ಸ್ಮೃತಾಃ (ಸದಾ) ।
ನಂದನಂ ತ್ವಪರಂ ಚೈತ್ರರಥಂ ವೈಭ್ರಾಜನಾಮಕಮ್ ॥ ೨೬ ॥

ಸರ್ವತೋಭದ್ರ ಇತಿ ತೇಷ್ವಚಲೇಷು ವನಾನಿ ಚ ।
ಅರುಣೋದಂ ಮಹಾಭದ್ರಂ ಶಿಶಿರೋದಂ ಸ ಮಾನಸಂ ॥ ೨೭ ॥

ಸರಾಂಸ್ಯೇತಾನಿ ಚತ್ವಾರಿ ದೇವಭೋಗ್ಯಾನಿ ಯಾನಿ ಚ ।
ಮಂದರೋತ್ಸಂಗಸಂಲಗ್ನಾದೇಕಾದಶಶತೋಚ್ಛ್ರಯಾತ್ ॥ ೨೮ ॥

ಪತಂತಿ ಚೂತವೃಕ್ಷಾಗ್ರಾದತಿಸ್ಥೂಲಾನಿ ಸರ್ವಶಃ ।
ಫಲಾನಿ ಶೀರ್ಯಮಾಣಾನಿ ಸುಧಾಕಲ್ಪರಸಾನಿ ಚ ॥ ೨೯ ॥

ಹಿಮಾಲಯ, ಹೇಮಕೂಟ, ನಿಷಧ, ನೀಲ, ಶ್ವೇತ ಹಾಗೂ ಶೃಂಗವಾನ್ ಈ ಪರ್ವತಗಳು ಭಾರತವೇ ಮೊದಲಾದ ಖಂಡಗಳ ಗಡಿಪರ್ವತಗಳಾಗಿವೆ. ನೀಲಪರ್ವತದಿಂದ ನಿಷಧಪರ್ವತದವರೆಗಿನ ಭಾಗದಲ್ಲಿ ಮಾಲ್ಯವಾನ ಹಾಗೂ ಗಂಧಮಾದನ ಪರ್ವತಗಳು ಕೇತುಮಾಲ ಮತ್ತು ಭದ್ರಾಶ್ವಗಳನ್ನು ಪ್ರತ್ಯೇಕಿಸುವ ಪರ್ವತಗಳಾಗಿದ್ದು ಇವು ೨,೦೦೦ ಯೋಜನಗಳಷ್ಟು ಎತ್ತರವಾಗಿವೆ. ಇಳಾವೃತದ ಮಧ್ಯದಲ್ಲಿ ಮೇರುವಿನ ಸುತ್ತಲೂ ೧೦,೦೦೦ ಯೋಜನ ವಿಸ್ತೀರ್ಣವಿರುವ ನಾಲ್ಕು

ಶೀಲಪರ್ವತಗಳಿವೆ. ಮೇರುವಿನೊಳಗೆ ೬,೦೦೦ ಯೋಜನದಷ್ಟು ಪ್ರವಿಷ್ಟವಾಗಿ ಇಳಾವೃತಖಂಡದ ನಾಲ್ಕೂ ದಿಕ್ಕುಗಳಲ್ಲಿ ೪,೦೦೦ ಯೋಜನ ಪ್ರದೇಶವನ್ನು ಕ್ರಮಿಸಿವೆ. ಮೇರುಪರ್ವತವು ೧೬,೦೦೦ ಯೋಜನ ವಿಸ್ತಾರವಿರುವುದರಿಂದ ಅದರ ಕೇಂದ್ರದಿಂದ ಹೊರಭಾಗದವರೆಗೆ ೮,೦೦೦ ಯೋಜನವಿದೆ. ಈ ಎಂಟು ಸಾವಿರದಲ್ಲಿ ನಾಲ್ಕು ದಿಕ್ಕುಗಳಲ್ಲೂ ೬,೦೦೦ ಯೋಜನ ಈ ಪರ್ವತಗಳಿಂದ ಪ್ರವಿಷ್ಟವಾಗಿವೆ. ಈ ಪರ್ವತಗಳನ್ನು ಅವಷ್ಟಂಭ ಪರ್ವತಗಳೆಂದು ಕರೆಯುತ್ತಾರೆ ॥ ೨೦-೨೨ ॥

ಮೇರುವಿನ ಪೂರ್ವದಲ್ಲಿರುವುದು ಮಂದರವೆಂತಲೂ, ದಕ್ಷಿಣದಲ್ಲಿ ಮೇರುಮಂದರವೆಂದೂ, ಪಶ್ಚಿಮದಲ್ಲಿ ಸುಪಾರ್ಶ್ವ ಎಂದೂ, ಉತ್ತರದಲ್ಲಿ ಕುಮುದ ಎಂದೂ, ಪುರಾಣಗಳಲ್ಲಿ ಉಕ್ತವಾಗಿವೆ. ಈ ನಾಲ್ಕು ಪರ್ವತಗಳಲ್ಲಿ ಏಕಾದಶ-ಶತಾಯಾಮವುಳ್ಳ ಚೂತ, ಜಂಬೂ, ಕದಂಬ ಹಾಗೂ ನ್ಯಗ್ರೋಧ ಎಂಬ ನಾಲ್ಕು ಮರಗಳು ಪರ್ವತಗಳ ಕೇತುಗಳಂತೆ ಇವೆ. ನೂರು ಯೋಜನ ವಿಸ್ತೀರ್ಣವುಳ್ಳ ಪಯೋ, [ಬ]ಮಧು, ಇಕ್ಷುರಸ, ಶುದ್ಧಜಲಗಳಿಂದ ಪೂರ್ಣವಾದ ಸರೋವರಗಳಿವೆ. ಇವುಗಳ ಸ್ಪರ್ಶಮಾತ್ರದಿಂದಲೇ ದಿವ್ಯದೇಹವನ್ನು ತಂದುಕೊಡುತ್ತವೆ. ಆ ಪರ್ವತಗಳಲ್ಲಿ [ಭ]ನಂದನ, ಚೈತ್ರರಥ, ವೈಭ್ರಾಜಕ ಹಾಗೂ ಸರ್ವತೋಭದ್ರ ಎಂಬ ನಾಲ್ಕು ದೇವತೆಗಳ ಉದ್ಯಾನಗಳಿವೆ. ಅರುಣೋದ, ಮಹಾಭದ್ರ, ಶಿಶಿರೋದ ಹಾಗೂ ಮಾನಸ ಎಂಬ ನಾಲ್ಕು ದೇವಭೋಗ್ಯವಾದ ಸರೋವರಗಳಿವೆ. ಮಂದರಪರ್ವತದಲ್ಲಿ ಏಕಾದಶಶತ[ಮ] ಯೋಜನ ಎತ್ತರವಿರುವ ಚೂತವೃಕ್ಷದಿಂದ ಅತ್ಯಂತ ದೊಡ್ಡಗಾತ್ರದ ಅಮೃತದಷ್ಟು ಸವಿಯಾದ ರಸವುಳ್ಳ ಫಲಗಳು ಬೀಳುತ್ತವೆ ॥ ೨೩-೨೯ ॥

**ಅರುಣೋದಾ ನಾಮ ನದೀ ಪೂರ್ವೇಲಾವೃತಮಧ್ಯಗಾತ್ ।**
**ಏಕಷಷ್ಟ್ಯಧಿಕಾರತ್ನತ್ರಿಶತಾ,ಟಕಮಿತಾನಿ ಚ ॥ ೩೦ ॥**

**ಜಂಬೂಫಲಾನಿ ಜ್ಞೇಯಾನಿ ವೃಕ್ಷಾಗ್ರಾತ್ ಪತಿತಾನಿ ವೈ ।**
**ತೇಷಾಂ ವಿಶೀರ್ಯಮಾಣಾನಾಂ ರಸೋಽಮೃತಮಯೋಭವೇತ್ ॥ ೩೧ ॥**

**ತದ್ರಸೇನಾವಹತ್ ಜಂಬೂನದೀ ವಿಬುಧಸೇವಿತಾ ।**
**ಮೇರುಮಂದರಶೈಲಾಗ್ರಾತ್ ನಿಪತಂತೀ ಧರಾತಲೇ ॥ ೩೨ ॥**

---

[ಬ] ಹ್ರದಾಶ್ಚತ್ವಾರಃ ಪಯೋಮಧ್ವಿಕ್ಷುರಸಮೃಷ್ಟಜಲಾಃ ಯದುಪಸ್ಪರ್ಶಿನಃ ।
ಉಪದೇವಗಣಾಃ ಯೋಗೈಶ್ವರ್ಯಾಣಿ ಸ್ವಾಭಾವಿಕಾನಿ ಭರತರ್ಷಭ ಧಾರಯಂತಿ ॥
- ಭಾಗವತ-೫-೧೬-೧೩

[ಭ] ದೇವೋದ್ಯಾನಾನಿ ಚ ಭವಂತಿ ಚತ್ವಾರಿ ನಂದನಂ, ಚೈತ್ರರಥಂ, ವೈಭ್ರಾಜಂ
ಸರ್ವತೋಭದ್ರಮಿತಿ - ಭಾಗವತ-೫-೧೬-೧೪

[ಮ] ಮಂದರೋತ್ಸಂಗೇ ಏಕಾದಶಶತಯೋಜನೋತ್ತುಂಗದೇವಚೂತಶಿರಸಃ ।
ಗಿರಿಶಿಖರಸ್ಥೂಲಾನಿ ಫಲಾನಿ ಅಮೃತಕಲ್ಪಾನಿ ನಿಪತಂತಿ ॥
- ಭಾಗವತ-೫-೧೬-೧೬

ಆಚೂತಫಲಗಳ ಅತಿಮಧುರವಾದ ಪರಿಮಳಭರಿತವಾದ ಕೆಂಪಾಗಿರುವ ರಸವುಳ್ಳ ನೀರಿನಿಂದ ಅರುಣೋದಾ[೩] ಎಂಬ ನದಿಯು ಇಲಾವೃತಖಂಡಪೂರ್ವಪ್ರದೇಶವನ್ನು ಪ್ರವಾಹಯುಕ್ತವನ್ನಾಗಿಸುತ್ತದೆ. ಹಾಗೆಯೇ ಮೇರುಮಂದರಪರ್ವತದಲ್ಲಿರುವ ಜಂಬೂವೃಕ್ಷದ ತುದಿಯಿಂದ ಜಂಬೂಫಲಗಳು ಬೀಳುತ್ತವೆ. ಅವುಗಳ ರಸವೂ ಅಮೃತಮಯವಾಗಿದ್ದು, ಆ ರಸದಿಂದ ಜಂಬೂನದಿಯು ಮೇರುಮಂದರಪರ್ವತದ ತುದಿಯಿಂದ ಹರಿದು ವಿಬುಧಜನರಿಂದ ಸೇವಿಸಲ್ಪಡುತ್ತಾ ಈ ಭೂಮಿಯಲ್ಲಿ ಹರಿಯುತ್ತಿದ್ದಾಳೆ. ಇಳಾವೃತಖಂಡದ ದಕ್ಷಿಣದಲ್ಲಿ ಈ ನದಿಯು ಹರಿಯುತ್ತಿದ್ದು, ಜರಾದಿ ದುರವಸ್ಥೆಯನ್ನು ಕಳೆಯುವಂಥದ್ದಾಗಿದೆ. ಹಾಗೆಯೇ[೪] ಸುಪಾರ್ಶ್ವ ಎಂಬ ಪರ್ವತದಲ್ಲಿ ಬೆಳೆದ ಮಹಾಕದಂಬ ವೃಕ್ಷದ ಪೊಟರೆಗಳಿಂದ ಪಂಚಮಧುಧಾರೆಗಳು ಹರಿದಿವೆ ॥ ೩೦-೩೩ ॥

**ಜರಾದಿದುರವಸ್ಥಾಘ್ನೀ ದಕ್ಷಿಣೇಽಲಾವೃತಂ ಯಯೌ ।**
**ಸುಪಾರ್ಶ್ವರೂಢಕಾದಂಬಕೊಟರೇಭ್ಯೋ ವಿನಿಸ್ಸೃತಾಃ ॥ ೩೩ ॥**

**ಪಂಚಹಸ್ತಾಯತಾಃ ಪಂಚ ಮಧುಧಾರಾ ಸ್ರವಂತಿ ಹಿ ।**
**ಪಶ್ಚಿಮೇಲಾವೃತಜನಾನ್ ಮೋದಯಂತಿ ಸುಧೋಪಮಾಃ ॥ ೩೪ ॥**

**ಕುಮುದಾಚಲಸಂಲಗ್ನ ವಟಸ್ಕಂದವಿನಿರ್ಗತಾಃ[5] ।**
**ಪಯೋಮಧುಘೃತಾದೀನಾಂ ನದಾ ಕಾಮದುಘಾ ಅಧಃ ॥ ೩೫ ॥**

**ಪತಂತಃ ಕುಮುದಾತ್ ಸೌಮ್ಯ ಮೋದಯಂತಿ ತ್ವಿಲಾವೃತಮ್ ।**
**ಕುರಂಗಃ ಕುರರಶ್ಚೈವ ವೈಕುಂಠೋಽಥ ಸುಕುಂಭಕಃ ॥ ೩೬ ॥**

---

[೩] ತೇಷಾಂ ವಿಶೀರ್ಯಮಾಣಾನಾಂ ಅತಿಮಧುರಸುರಭಿಸುಗಂಧಿ ಬಹಳಾಮಣರಸೋದೇನ ಅರುಣೋದಾ ನಾಮ ನದೀ ಮಂದರಗಿರಿವರಶಿಖರಾನ್ನಿಪತಂತೀ ಪೂರ್ವೇಣೇಳಾವೃತಮುಪಪ್ಲಾವಯಂತಿ ॥
- ಭಾಗವತ-೫-೧೬-೧೭

[೪] ಯಸ್ತು ಮಹಾಕದಂಬಃ ಸುಪಾರ್ಶ್ವ ನಿರೂಢಃ ತಸ್ಯ ಕೂಟರೇಭ್ಯಃ ವಿನಿಃಸೃತಾಃ ಪಂಚವ್ಯಾಮಪರಿಣಾಹಾಃ ಪಂಚಮಧುಧಾರಾಃ ಸುಪಾರ್ಶ್ವಶಿಖರಾತ್ ಪತಂತ್ಯಃ ಅಪರೇಣ ಆತ್ಮಾನಂ ಇಲಾವೃತಂ ಅನುಮೋದಯಂತಿ ॥
- ಭಾಗವತ-೫-೧೬-೧೭

5 ಏವಂ ಕುಮುದನಿರೂಢೋ ಯಃ ಶತವಲ್ಕಲೋ ನಾಮ ವಟಃ ತಸ್ಯ ಸ್ಕಂಧೇಭ್ಯೋಽರ್ವಾಚೀನಾಃ ಪಯೋದಧಿಮಧುಘೃತಗುಡಾನ್ನಾದ್ಯಂಬರಶಯ್ಯಾಸನಾಭರಣಾದಯಃ ಸರ್ವೇ ಏವ ಕಾಮದುಘಾಃ ನದಾಃ ಕುಮುದಾಗ್ರಾತ್ ಪತಂತಃ ತಮುತ್ತರೇಣೇಳಾವೃತಮುಪಯೋಜಯತಿ ॥
- ಭಾಗವತ-೫-೧೬-೨೩

6 ಕುರಂಗ, ಕುರರ, ಕುಸುಂಭ, ವೈಕಂಕ, ತ್ರಿಕೂಟ, ಶಿಶಿರ, ಪತಂಗ, ರುಚಕ, ನಿಷಧಶಿತಿವಾಸಕಪಿಲಶಂಖವೈಢೂರ್ಯಜಾರೂಧಿಹಂಸರ್ಷಭನಾಗಸಾಲಂಜರನಾರದಾದಯಃ ಗಿರಯಃ ಮೇರೋಃ ಕರ್ಣಿಕಾಯಾಃ ಇವ ಕೇಸರಭೂತಾಃ ಮೂಲದೇಶೇ ಪರಿತಃ ಉಪಕ್ಲೃಪ್ತಾಃ ॥
- ಭಾಗವತ-೫-೧೬-೨೫

ಸುಪಾರ್ಶ್ವ ಎಂಬ ಪರ್ವತದಲ್ಲಿ ಬೆಳೆದ ಕದಂಬವೃಕ್ಷದಿಂದ ಪೊಟರೆಗಳ ಮೂಲಕ ಹರಿದ ಐದು ಹಸ್ತಪರಿಣಾಹವುಳ್ಳ, ಅಮೃತಸದೃಶವಾದ ಐದು ಮಧುಧಾರೆಗಳು ಹರಿಯುತ್ತಿವೆ. ಇಲಾವೃತಖಂಡದ ಪಶ್ಚಿಮದಲ್ಲಿ ಹರಿಯುತ್ತ ಅಲ್ಲಿಯ ಜನರನ್ನು ಮೋದಪಡಿಸುತ್ತಿವೆ ॥ ೩೪ ॥

ಕುಮುದ ಎಂಬ ಪರ್ವತದಲ್ಲಿ ಬೆಳೆದ ಶತವಲ್ಕಲ ಎಂಬ ವಟವೃಕ್ಷದ ರೆಂಬೆಗಳಿಂದ ಹೊರಹೊಮ್ಮಿದ ಪಯೋ, ದಧಿ, ಮಧು, ಘೃತ, ಗುಡ ಮೊದಲಾದ ಇಷ್ಟಾರ್ಥಗಳನ್ನೆಲ್ಲಾ ನೀಡುವ ನದಗಳಾಗಿ ಹರಿಯುತ್ತಾ ಇಳಾವೃತಖಂಡದ ಉತ್ತರದಲ್ಲಿರುವ ಜನರನ್ನು ಮೋದಗೊಳಿಸುತ್ತಿವೆ. ಕುರಂಗ, ಕುರರ, ವೈಕುಂಠ (ವೈಕಂಕ), ಸುಕುಂಭಕ (ಕುಸುಂಭ) ಹಾಗೂ ತ್ರಿಕೂಟ ಎಂಬ ಐದು ಕೇಸರಪರ್ವತಗಳು ಪೂರ್ವದಲ್ಲಿವೆ. ॥ ೩೫-೩೬ ॥

**ಸು(ತ್ರಿ)ಕೂಟ ಇತಿ ಪಂಚೈತೇ ಪೌರಸ್ತ್ಯಾಃ ಕೇಸರಾಚಲಾಃ[6] ।**
**ಪತಂಗ ಶಿಶಿರೋ ರುಚಃ ನಿಷಧಃ ಶಿತಿವಾಸಕಃ ॥ ೩೭ ॥**

**ಏತೇ ದಕ್ಷಿಣತಃ ಸಂತಿ ಪಂಚ ಕೇಸರಪರ್ವತಾಃ ।**
**ಕಪಿಲಃ ಶಂಖವೈಡೂರ್ಯೌ ಜಾರೂಧೀಹಂಸಸಂಜ್ಞಕಃ ॥ ೩೮ ॥**

**ಮೇರುಪಶ್ಚಿಮದೇಶಸ್ಥಾಃ ವೃಷಭೋ ನಾಗನಾಮಕಃ ।**
**ಕಾಲಂಜನೋ ನಾರದಾಖ್ಯಃ ಉತ್ತರೇ ಕೇಸರಾಚಲಾಃ ॥ ೩೯ ॥**

**[7]ಜಠರೋ ದೇವಕೂಟಶ್ಚ ದ್ವಿಸಹಸ್ರಪೃಥೂನ್ನತೌ ।**
**ಅಷ್ಟಾದಶಸಹಸ್ರಾಣಿ ದಕ್ಷಿಣೋತ್ತರಮಾಯತೌ ॥ ೪೦ ॥**

ಪತಂಗ ಶಿಶಿರ, ರುಚಕ, ನಿಷಧ ಹಾಗೂ ಶಿತಿವಾಸಕ ಎಂದು ಐದು ಕೇಸರಪರ್ವತಗಳು ದಕ್ಷಿಣದಲ್ಲಿವೆ ॥ ೩೭-೩೭ ॥ ಮೇರುಪರ್ವತದ ಪಶ್ಚಿಮದಲ್ಲಿ ಕಪಿಲ, ಶಂಖ, ವೈಢೂರ್ಯ, ಜಾರೂಧಿಃ, ಹಂಸ ಎಂಬ ಹೆಸರಿನ ಐದು ಕೇಸರಪರ್ವತಗಳಿವೆ. ಹಾಗೆಯೇ ಉತ್ತರದಲ್ಲಿ ವೃಷಭ, ನಾಗ, ಕಾಲಂಜನ, ನಾರದ ಎಂಬ ಹೆಸರಿನ ಕೇಸರಪರ್ವತಗಳು ಇವೆ ॥ ೩೮-೩೯ ॥

ಈ ಇಲಾವೃತವರ್ಷದ ಮೇರುವಿನ ಪೂರ್ವದಲ್ಲಿ ದಕ್ಷಿಣೋತ್ತರವಾಗಿ ಜಠರ ಹಾಗೂ ದೇವಕೂಟ ಎಂಬ ಹದಿನೆಂಟು ಸಾವಿರ ಯೋಜನ ಉದ್ದವಿರುವ ಎರಡು ಸಾವಿರ ಯೋಜನ ಎತ್ತರ ಹಾಗೂ ದಪ್ಪ ಇರುವ ಪರ್ವತಗಳು ಹಬ್ಬಿಕೊಂಡಿವೆ ॥ ೪೦ ॥

---

7 ಜಠರದೇವಕೂಟೌ ಮೇರುಂ ಪೂರ್ವೇಣ ಅಷ್ಟಾದಶಯೋಜನ ಸಹಸ್ರಮುದಗಾಯತೌ ದ್ವಿಸಹಸ್ರಂ ಪೃಥೂನ್ನತೌ ಭವತಃ । ಏವಮಪರೇಣ ಪವನಪಾರಿಯಾತ್ರೌ ದಕ್ಷಿಣೇನ ಕೈಲಾಸಕರವೀರೌ ಪ್ರಾಗಾಯತಾವೇವಂ ಉತ್ತರತಃ ತ್ರಿಶೃಂಗಮಕರಾದಷ್ಟಭಿ ಏತೈಃ ಪರಿಸ್ತೃತಃ ಅಗ್ನಿರಿವ ಪರಿತಃ ಚಕಾಸ್ತಿ ಕಾಂಚನಗಿರಿಃ ॥

- ಭಾಗವತ-೫-೧೬-೨೬

ಹಾಗೆಯೇ ಮೇರುಪರ್ವತದ ಪಶ್ಚಿಮ ದಿಕ್ಕಿನಲ್ಲಿ ಪವನ ಮತ್ತು ಪಾರಿಯಾತ್ರ ಎಂಬ ಪರ್ವತಗಳು ದಕ್ಷಿಣೋತ್ತರವಾಗಿ ಹದಿನೆಂಟು ಸಾವಿರ ಯೋಜನ ದೀರ್ಘವಾಗಿಯೂ ಎರಡು ಸಾವಿರ ಯೋಜನ ಉನ್ನತ ಹಾಗೂ ಪೃಥುವಾಗಿಯೂ ಹರಡಿಕೊಂಡಿವೆ ॥ ೪೧ ॥

**ಇಲಾವೃತ ಪ್ರದೇಶೇಷು ಮೇರೋಃ ಪೂರ್ವಮವಸ್ಥಿತೌ ।**
**ಏವಂ ಪಶ್ಚಿಮಭಾಗೇಽಪಿ ಪವನಃ ಪಾರಿಯಾತ್ರಕಃ ॥ ೪೧ ॥**

**ಇತ್ಯುಭೌ ತಿಷ್ಠತೋ ಮೇರೋಃ ದಕ್ಷಿಣಸ್ಯಾಂ ತಥಾ ದಿಶಿ ।**
**ಕೈಲಾಸಕರವೀರಾಖ್ಯೌ ಪ್ರಾಕ್ ಪಶ್ಚಾದಾಯತಾವುಭೌ ॥ ೪೨ ॥**

**ಏವಮುತ್ತರತಃ ಶೃಂಗಮಕರಾವೇವಮದ್ರಯಃ ।**
**ಪರಿಸ್ತರಣರೂಪೇಣ ತಿಷ್ಠಂತ್ಯಷ್ಟೌ ಚತುರ್ದಿಶಂ ॥ ೪೩ ॥**

**ಯೋಜನಾಯುತವಿಸ್ತೀರ್ಣಾ ಬ್ರಹ್ಮಣೋ ಮೇರುಮೂರ್ಧನಿ ।**
**ಶತಕೋಟಿರಿತಿಖ್ಯಾತಾ ಶಾತಕುಂಭಮಯೀ ಪುರೀ ॥ ೪೪ ॥**

**ತಸ್ಯಾಃ ಸಮಂತತಶ್ಚಾಷ್ಟೌ ದಿಶಾಸು ವಿದಿಶಾಸು ಚ ।**
**ಇಂದ್ರಾದಿಲೋಕಪಾಲಾನಾಂ ಪ್ರಖ್ಯಾತಾಃ ಪ್ರವರಾಃ ಪುರಃ ॥ ೪೫ ॥**

**ಬ್ರಹ್ಮಪುರ್ಯಾಶ್ಚತುರ್ಥಾಂಶಪರಿಮಾಣಯುತಾಸ್ತು ತಾಃ ।**
**ಪೂರ್ವಾಮರಾವಲೀ ನಾಮ ಪುರೀಂದ್ರಸ್ಯ ಪ್ರಕೀರ್ತಿತಾ ॥ ೪೬ ॥**

**ತೇಜೋವತೀ ಪರಾ ಜ್ಞೇಯಾ ಯಾಮ್ಯಾ ಸಂಯಮನೀ ಪುರೀ ।**
**ರಕ್ಷೋವತೀರಾಕ್ಷಸಪೂರ್ನಿರ್ಮ್ಲೋಚನ್ಯಥ ವಾರುಣೀ ॥ ೪೭ ॥**

ಮೇರುಪರ್ವತದ ದಕ್ಷಿಣದಲ್ಲಿ ಪೂರ್ವ-ಪಶ್ಚಿಮವಾಗಿ ಹದಿನೆಂಟು ಸಾವಿರ ಯೋಜನ ದೀರ್ಘವಾಗಿರುವ ಎರಡು ಸಾವಿರ ಯೋಜನ ಎತ್ತರ ಹಾಗೂ ವಿಸ್ತಾರವಾಗಿರುವ ಕೈಲಾಸ, ಕರವೀರ ಎಂಬ ಪರ್ವತಗಳು ಹರಡಿವೆ. ಹಾಗೆಯೇ ಉತ್ತರದಲ್ಲಿ ಪೂರ್ವ-ಪಶ್ಚಿಮವಾಗಿ ಅಷ್ಟು ಪ್ರಮಾಣವುಳ್ಳ ಶೃಂಗ ಹಾಗೂ ಮಕರವೆಂಬ ಪರ್ವತಗಳು ಹೀಗೆ ಎರಡೆರಡರಂತೆ ನಾಲ್ಕೂ ದಿಕ್ಕುಗಳಲ್ಲಿ ಪರಿಸ್ತರಣದಂತಿವೆ ॥ ೪೨-೪೩ ॥

ಇಂತಹ ಮೇರುವಿನ ಮೂರ್ಧಸ್ಥಾನದಲ್ಲಿ ೧೦ ಸಾವಿರ ವಿಸ್ತೀರ್ಣವುಳ್ಳ ಸುವರ್ಣಮಯಾದ ಶತಕೋಟಿ ಎಂಬ ಹೆಸರಿನಿಂದ ಪ್ರಸಿದ್ಧವಾದ ಬಂಗಾರದ ಬ್ರಹ್ಮನ ಪುರಿ ಇದೆ. ಆ ಶತಕೋಟಿ ಎಂಬ ಪುರಿಯ ಸುತ್ತಲೂ ಎಂಟು ದಿಕ್ಕು ಹಾಗೂ ವಿದಿಕ್ಕುಗಳಲ್ಲಿ ಇಂದ್ರನೇ ಮೊದಲಾದ ಲೋಕಪಾಲರ ಪ್ರಸಿದ್ಧವಾದ ಬಂಗಾರದ ಬ್ರಹ್ಮನ ಪುರಿ ಇದೆ. ಆ ಶತಕೋಟಿ ಎಂಬ ಪುರಿಯ ಸುತ್ತಲೂ ಎಂಟು ದಿಕ್ಕು ಹಾಗೂ ವಿದಿಕ್ಕುಗಳಲ್ಲಿ ಇಂದ್ರನೇ ಮೊದಲಾದ ಲೋಕಪಾಲರ ಪ್ರಸಿದ್ಧವಾದ ಪುರಗಳಿವೆ ॥ ೪೪-೪೫ ॥

ಬ್ರಹ್ಮಪುರಿಯ ಪ್ರಮಾಣದ ಕಾಲುಭಾಗ ಪ್ರಮಾಣ ಅಷ್ಟದಿಕ್ಪಾಲಕರಪುರಗಳ ಪ್ರಮಾಣವಾಗಿವೆ. ಅದರಲ್ಲಿ ಇಂದ್ರನ ಪುರಿಯು ಅಮರಾವತೀಪುರೀ ಎಂದು ಖ್ಯಾತವಾಗಿದೆ. ಹಾಗೆಯೇ ಉಳಿದ ದಿಕ್ಪತಿಗಳ ನಗರಗಳು ತೇಜೋವತಿ, ಸಂಯಮಿನೀ, ರಕ್ಷೋವತೀ, ನಿಮ್ಲೋಚನೀ, ಗಂದವತೀ, ವಿಭಾವರೀ ಹಾಗೂ ಯಶಸ್ವಿನೀ ಎಂದು ಖ್ಯಾತವಾಗಿದೆ. ನಾನಾ ವರ್ಣಮಯವಾದ ಗೋಪುರ, ತೋರಣಗಳಿಂದ ಕೂಡಿವೆ ॥ ೪೬-೪೮ ॥

ವಾಯೋರ್ಗಂಧವತೀ ಖ್ಯಾತಾ ಪುರೀ ಸಾಮ್ಯಾ ವಿಭಾವರೀ ।
ಯಶಸ್ವಿನೀ ಭವಸ್ಯೋಕ್ತಾ ಚಿತ್ರಗೋಪುರತೋರಣಾ ॥ ೪೮ ॥

ವಿಷ್ಣುಪಾದವಿನಿಷ್ಕ್ರಾಂತಾ ಪಾವಯಿತ್ವೇಂದುಮಂಡಲಮ್ ।
ಸಮಂತಾತ್ ಬ್ರಹ್ಮಣಃ ಪುರ್ಯಾಂ ಗಂಗಾ ಪತತಿ ಪಾವನೀ ॥ ೪೯ ॥

ಸೀತಾಚಾಲಕನಂದಾ ಚ ಚಕ್ಷುರ್ಭದ್ರೇತಿ ಸಾ ಪುನಃ ।
ಚತುರ್ಧಾ ಪ್ರವಿಭಕ್ತೋದವಾಹ್ಯೈತಿ ಸರಿತಾಂ ಪತಿಮ್ ॥ ೫೦ ॥

ಸೀತಾ ತು ಬ್ರಹ್ಮಸದನಾತ್ ಪೌರಕೇಸರಪರ್ವತಾನ್ ।
ಅತೀತ್ಯಪೂರ್ವವರ್ಷೇಣ ಭದ್ರಾಶ್ವೇನೈತಿ ಚಾರ್ಣವಮ್ ॥ ೫೧ ॥

ತಥೈವಾಲಕನಂದಾಪಿ ದಕ್ಷಿಣೇನೈತ್ಯ ಭಾರತಮ್ ।
ಪ್ರಯಾತಿ ಸಾಗರಂ ಸಪ್ತಭೇದಯುಕ್ತಾಘಮರ್ದಿನೀ ॥ ೫೨ ॥

ಸುಚಕ್ಷುಃ ಪಶ್ಚಿಮಗಿರೀನ್ ಅತೀತ್ಯ ಸಕಲಾಂಸ್ತತಃ ।
ಕೇತುಮಾಲಂ ಸಮಭ್ಯೇತ್ಯ ವರ್ಷಂ ಸಾಗರಮೇತ್ಯ ಸಾ ॥ ೫೩ ॥

ಭದ್ರೋತ್ತರಗಿರೀಂಸ್ತೀರ್ತ್ವಾ ಕುರುವರ್ಷೇಣ ಚಾರ್ಣವಮ್ ।

॥ ಇತಿ ಶ್ರೀವಾದೀಂದ್ರ ವಿರಚಿತ ಭೂಗೋಲೇ ಪ್ರಥಮೋಽಧ್ಯಾಯಃ ॥

ವಿಷ್ಣುವಿನ ಪಾದದಿಂದ ಉದಯಿಸಿದ ಪಾವನೆಯಾದ ಗಂಗೆಯು ಚಂದ್ರಮಂಡಲವನ್ನು ಆರ್ದ್ರಗೊಳಿಸಿ ಬ್ರಹ್ಮನ ಪುರಿಯಲ್ಲಿ ಎಲ್ಲೆಡೆಯಲ್ಲಿ ಹರಿಯುತ್ತಾಳೆ. ಈ ಗಂಗೆಯು ಸೀತಾ, ಅಲಕಾನಂದಾ, ಚಕ್ಷು, ಭದ್ರಾ ಎಂಬುದಾಗಿ ನಾಲ್ಕು ಕವಲಾಗಿ ಹರಿದು ಸಾಗರವನ್ನು ಸೇರುತ್ತಾಳೆ. ಸೀತಾನದಿಯು ಬ್ರಹ್ಮಸದನದಿಂದ ಪೂರ್ವದಲ್ಲಿರುವ ಕೇಸರಪರ್ವತಗಳನ್ನು ದಾಟಿ ಪೂರ್ವದಲ್ಲಿದ್ದ ಭದ್ರಾಶ್ವಖಂಡದ ಮೂಲಕ ಸಮುದ್ರವನ್ನು ಸೇರುತ್ತದೆ. ಹಾಗೆಯೇ ಅಲಕನಂದಾ ನದಿಯು ದಕ್ಷಿಣದ ಮೂಲಕವಾಗಿ ಭಾರತದಲ್ಲಿ ಹರಿದು ಏಳು ಕವಲುಗಳಾಗಿ ಪಾಪಗಳನ್ನು ಕಳೆಯುತ್ತ ಸಮುದ್ರವನ್ನು ಸೇರುತ್ತಾಳೆ. ಹಾಗೆಯೇ ಚಕ್ಷುನದಿಯು ಪಶ್ಚಿಮದಲ್ಲಿರುವ

ಎಲ್ಲಾ ಗಿರಿಗಳನ್ನು ದಾಟಿ, ಕೇತುಮಾಲ ವರ್ಷವನ್ನು ದಾಟಿ ಸಮುದ್ರಕ್ಕೆ ಸೇರುತ್ತಾಳೆ. ಭದ್ರಾ ಎಂಬ ನದಿಯು ಉತ್ತರದಲ್ಲಿರುವ ಪರ್ವತಗಳನ್ನು ದಾಟಿ ಕುರುಖಂಡದ ಮೂಲಕವಾಗಿ ಸಮುದ್ರವನ್ನು ಸೇರುತ್ತದೆ ॥ ೪೯-೫೩ ॥

॥ ಶ್ರೀವಾದೀಂದ್ರತೀರ್ಥ ವಿರಚಿತ ಭೂಗೋಲದಲ್ಲಿ ಒಂದನೆಯ ಅಧ್ಯಾಯವು ಮುಗಿಯಿತು ॥



## ದ್ವಿತೀಯೋಽಧ್ಯಾಯಃ

**ಉತ್ತರಂ ಯತ್ ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಂ ।**
**ವರ್ಷಂ ತದ್ ಭಾರತಂ ನಾಮ ನವಸಾಹಸ್ರವಿಸ್ತೃತಮ್ ॥ ೧ ॥**

**ಕರ್ಮಭೂಮಿರಿಯಂ[1] ಸ್ವರ್ಗಮಪವರ್ಗಂ ಚ ಗಚ್ಛತಾಮ್ ।**
**ಇತರೇಷು ಚ ವರ್ಷೇಷು ನ ಕರ್ಮಾಧಿಕೃತಿರ್ಭವೇತ್ ॥ ೨ ॥**

**ಭೌಮಾ ಹ್ಯೇತೇ ಸ್ಮೃತಾಃ ಸ್ವರ್ಗಾಃ ಭಾರತೇ ಕೃತಕರ್ಮಣಾಮ್ ।**
**ಭಾರತೇ ನಾರದೋ ಭಕ್ತ್ಯಾ ನರನಾರಾಯಣಂ ಹರಿಮ್ ॥ ೩ ॥**

ದಕ್ಷಿಣಸಮುದ್ರದಿಂದ ಉತ್ತರಕ್ಕೆ ಹಿಮಾಲಯದ ದಕ್ಷಿಣಕ್ಕೆ ೯,೦೦೦ ಯೋಜನ ವಿಸ್ತೀರ್ಣದಷ್ಟು ಹಬ್ಬಿದ ಖಂಡವು ಭರತಖಂಡವಾಗಿದೆ. ಸ್ವರ್ಗ ಹಾಗೂ ಅಪವರ್ಗವನ್ನು ಹೊಂದುವವರಿಗೆ ಇದು ಕರ್ಮಭೂಮಿಯಾಗಿದೆ. ಇನ್ನಿತರ ಖಂಡಗಳಲ್ಲಿ ಕರ್ಮಾಧಿಕಾರವಿರುವುದಿಲ್ಲ. ಇವುಗಳು ಭಾರತದಲ್ಲಿ ಪುಣ್ಯಾರ್ಜನೆ ಮಾಡಿದ ಜನರಿಗೆ ಭೂಲೋಕದ ಸ್ವರ್ಗಗಳಾಗಿವೆ. ಈ ಭಾರತದಲ್ಲಿ ನಾರದರು ನರನಿಂದ ಸಹಿತನಾದ ನಾರಾಯಣನನ್ನು ಭಕ್ತಿಯಿಂದ ಅರ್ಚಿಸುತ್ತಿರುವರು. ಹಿಮವತ್ಪರ್ವತದ ಪುಣ್ಯವಾದ ಶಿಖರದಲ್ಲಿರುವ ಬದರಿಕಾಶ್ರಮದಲ್ಲಿ ನರನಿಂದ ಸಹಿತನಾದ ನಾರಾಯಣನು ಸಿದ್ಧರ್ಷಿಗಳಿಂದ ಸಹಿತರಾದ[೨] ನಾರದರಿಂದ ಅರ್ಚಿಸಲ್ಪಡುತ್ತಾನೆ. ಭಗವಾನ್ ವ್ಯಾಸರೂಪಿ ಹರಿಯೂ

---

1 ಈ ಭಾರತವು ಪುಣ್ಯಭೂಮಿ. ಇಲ್ಲಿ ಜನ್ಮ ಪಡೆದ ಪುರುಷರಿಗೆ ಭಗವಂತನಲ್ಲಿ ಅನನ್ಯ ನಿಮಿತ್ತ ಭಕ್ತಿಯನ್ನು ಮಾಡುತ್ತ ಸ್ವಸ್ವವರ್ಣಾಶ್ರಮೋಚಿತಧರ್ಮಾನುಷ್ಠಾನ ಮಾಡುವವರಿಗೆ ಮೋಕ್ಷವು ಆಗುತ್ತದೆಂದು ದೇವತೆಗಳು ಸ್ತುತಿಸುತ್ತಿರುವರು.

**ಅಹೋ ಬತೈಷಾಂ ಕಿಮಕಾರಿ ಶೋಭನಂ ಪ್ರಸನ್ನ ಏಷಾಂ ಸ್ವಿದುತ ಸ್ವಯಂ ಹರಿಃ ।**
**ಯೈರ್ಜನ್ಮ ಲಬ್ಧಂ ನೃಷು ಭಾರತಾಜಿರೇ ಮುಕುಂದಸೇದೌಪರಿಮಿತಸ್ಪೃಹಾತ್ಯಭಿಃ ॥**

ಇತ್ಯಾದಿ ಶ್ಲೋಕಗಳಿಂದ ಭಾರತಖಂಡ ಶ್ರೇಷ್ಠತೆಯನ್ನು ಭಾಗವತ ಪಂಚಮ ಸ್ಕಂದದಲ್ಲಿ ನಿರೂಪಿಸಲಾಗಿದೆ.

೨ **ನರೇಣ ಸಹಿತೋ ನಾರಾಯಣಃ ಸಿದ್ಧರ್ಷಿ ಸೇವಿತಃ । ನಾರದೇನಾರ್ಚ್ಯತೇ ನಿತ್ಯಂ ಸಹ ಸಪ್ತರ್ಷಿಪೂರುಷೈಃ ॥ ವ್ಯಾಸರೂಪೀ ಚ ಭಗವಾನ್ ಅತ್ರೈವ ಕಿಲ ಪೂಜ್ಯತೇ । ವಾಯೋಸ್ತೃತೀಯರೂಪೇಣ ಮಧ್ವೇನ ಮುನಿಭಿಃ ಸಹ ॥**

- ಶ್ರೀವಾದಿರಾಜರ ಭೂಗೋಲವರ್ಣನಂ

ಸಹ ಇಲ್ಲಿಯೇ ವಾಯುವಿನ ತೃತೀಯ ಅವತಾರರೂಪರಾದ ಶ್ರೀಮದಾಚಾರ್ಯರಿಂದ ಪೂಜಿಸಲ್ಪಡುತ್ತಾನೆ. ॥ ೧-೩ ॥

**ಉಪಾಸ್ತೇ ಹನೂಮಾನ್ ರಾಮಂ ವರ್ಷೇ ಕಿಂಪುರುಷಾಹ್ವಯೇ ।**
**ಪ್ರಹ್ಲಾದೋ ಹರಿವರ್ಷಾಖ್ಯೇ ನೃಹರಿಂ ಭಜತೇ ಶಿವಃ ॥ ೪ ॥**

**ಇಲಾವೃತೇ ಮಹಾಭಕ್ತ್ಯಾ ಸಂಕರ್ಷಣ ಸಮಾಹ್ವಯಮ್ ।**
**ವೈವಸ್ವತೋ ಮನುರ್ಮತ್ಸ್ಯಂ ರಮ್ಯೇ, ಪಿತೃಗಣಾಧಿಪಃ ॥ ೫ ॥**

**[2]ಹಿರಣ್ಮಯೇಽರ್ಯಮಾ ಕೂರ್ಮಂ, ಭೂದೇವೀ ಕುರುವರ್ಷಕೇ ।**
**ಉಪಾಸ್ತೇ ಯಜ್ಞವಾರಾಹಂ, ಭದ್ರಾಶ್ವೇ ಹಯಮಸ್ತಕಮ್ ॥ ೬ ॥**

ಗಡಿಪರ್ವತವಾದ ಹಿಮಾಲಯದಿಂದ ಉತ್ತರಕ್ಕೆ ಕಿಂಪುರುಷ ಎಂಬ ಖಂಡವಿದೆ. ಅಲ್ಲಿ ಶ್ರೀರಾಮನನ್ನು ಹನುಮಂತನು ಉಪಾಸನೆ ಮಾಡುತ್ತಿದ್ದಾನೆ. ಹಿಮಾಲಯ ಹಾಗೂ ಹೇಮಕೂಟ ಪರ್ವತಗಳ ಮಧ್ಯಭಾಗದಲ್ಲಿದ್ದ ಈ ಖಂಡವೂ ೯,೦೦೦ ಯೋಜನ ವಿಸ್ತೀರ್ಣವುಳ್ಳದ್ದಾಗಿದೆ. ಹೇಮಕೂಟ ಹಾಗೂ ಮೇರುವಿನ ದಕ್ಷಿಣದಲ್ಲಿರುವ ನಿಷಧ ಪರ್ವತಗಳ ಮಧ್ಯದಲ್ಲಿ ೯,೦೦೦ ಯೋಜನ ವಿಸ್ತೀರ್ಣವುಳ್ಳ ಖಂಡವೇ ಹರಿವರ್ಷ. ಈ ಹರಿವರ್ಷದಲ್ಲಿ ಪ್ರಹ್ಲಾದನು ನರಸಿಂಹನನ್ನು ಸ್ತುತಿಸುತ್ತಿರುವನು. ಇಳಾವೃತಖಂಡದಲ್ಲಿ ಶಿವನು ಅತ್ಯಂತ ಭಕ್ತಿಯಿಂದ ಸಂಕರ್ಷಣನಾಮಕ ಹರಿಯನ್ನು ಸ್ತುತಿಸುತ್ತಿರುವನು. ಇಳಾವೃತಖಂಡ ಉತ್ತರಕ್ಕಿರುವ ೯,೦೦೦ ಯೋಜನ ವಿಸ್ತೀರ್ಣವುಳ್ಳ ರಮ್ಯಕ ವರ್ಷದಲ್ಲಿ ವೈವಸ್ವತ ಮನುವು ಮತ್ಸ್ಯರೂಪಿಯಾದ ನಾರಾಯಣನನ್ನು ಸೇವಿಸುತ್ತಿರುವನು. ರಮ್ಯಕ ಖಂಡದಿಂದ ಉತ್ತರಕ್ಕೆ ಶ್ವೇತಪರ್ವತ ಹಾಗೂ ಶೃಂಗವಾನ್ ಪರ್ವತಗಳ ಮಧ್ಯಭಾಗವೇ ಹಿರಣ್ಮಯಖಂಡ. ಈ ಹಿರಣ್ಮಯಖಂಡದಲ್ಲಿ ಪಿತೃಗಣಾಧಿಪನಾದ ಅರ್ಯಮನು ಕೂರ್ಮರೂಪಿಯಾದ ಹರಿಯನ್ನು ಸೇವಿಸುತ್ತಿರುವನು. ಹಿರಣ್ಮಯಖಂಡದಿಂದ ಉತ್ತರಕ್ಕೆ ಕುರು ಎನ್ನುವ ವರ್ಷವು ದೇವರ್ಷಿಗಳಿಂದ ಸೇವಿತವಾಗಿದೆ. ಉತ್ತರಸಮುದ್ರದವರೆಗೂ ಈ ವರ್ಷವು ಹಬ್ಬಿದೆ. ಇದೂ ಸಹ ೯,೦೦೦ ಯೋಜನವುಳ್ಳ ಹಿರಣ್ಮಯಖಂಡದಂತೆ ೯,೦೦೦ ಯೋಜನ ವಿಸ್ತೀರ್ಣವುಳ್ಳದ್ದಾಗಿದೆ. ಇಲ್ಲಿ ಕುರುಗಳ ಸಹಿತನಾಗಿ ಧರಣೀದೇವಿಯಿಂದ ಯಜ್ಞವರಾಹನೆಂಬ ನಾರಾಯಣನು ಉಪಾಸಿಸಲ್ಪಡುತ್ತಿರುವನು. ಇಳಾವೃತಖಂಡದಿಂದ ಪೂರ್ವದಿಕ್ಕಿನ ಸಮುದ್ರದವರೆಗೂ ವಿಸ್ತೃತವಾದ ಭದ್ರಾಶ್ವಖಂಡದಲ್ಲಿ ಧರ್ಮಪುತ್ರನಾದ ಭದ್ರಶ್ರವಸ್ ಎಂಬುವನು ಹಯಮಸ್ತಕನನ್ನು ಉಪಾಸನೆ ಮಾಡುತ್ತಿರುವನು.

---

2 **ಹಿರಣ್ಮಯೇಽಪಿ ಭಗವಾನ್ ನಿವಸತಿ ಕೂರ್ಮತನುಂ ಬಿಭ್ರಾಣಃ ತಸ್ಯ ಪ್ರಿಯತಮಾಂ ತನುಂ ಅರ್ಯಮಾ ಸಹ ತದ್ವರ್ಷಪುರುಷೈಃ ಪಿತೃಗಣಾಧಿಪತಿಃ ಉಪಧಾವತಿಮಂತ್ರಮಿಮಂ ಚಾನೂಪಜಪತಿ ॥**

- ಭಾಗವತ-೫-೧೮-೨೯

ಭದ್ರಶ್ರವಾಃ ಕೇತುಮಾಲೇ ಕಾಮರೂಪಂ ಹರಿಂ ರಮಾ ।
ಭಜತೇ ಭಾರತೇ ವರ್ಷೇ ಸರಿತೋ ಬಹವೋಽಚಲಾಃ ॥ ೭ ॥

ಮಲಯೋ ಮಂಗಲಪ್ರಖ್ಯೋ[3] ಮೈನಾಕೋಽಥ ತ್ರಿಕೂಟಕಃ ।
ಋಷಭಃ [4]ಸನಕಃ [5]ಕೋಲಃ ಸಹ್ಯಃ [6]ಕ್ರೋಡಗಿರಿಸ್ತಥಾ ॥ ೮ ॥

ಋಷ್ಯಮೂಕೋ ವೇಂಕಟಾದ್ರಿಃ ಶ್ರೀಶೈಲೋಽಥ ಮಹೇಂದ್ರಕಃ ।
[7]ಗಿರಿಧಾರಾಚಲೋ ವಿಂಧ್ಯಃ ಶುಕ್ತಿಮಾನ್ ಋಕ್ಷಪರ್ವತಃ ॥ ೯ ॥

ಪಾರಿಯಾತ್ರಾಚಲೋ ದ್ರೋಣಃ ಚಿತ್ರಕೂಟೋಽಚಲೋಽಪರಃ ।
ಗೋವರ್ಧನೋ ರೈವತಾಖ್ಯಃ ಕಕುಭೋ ನೀಲನಾಮಕಃ ॥ ೧೦ ॥

ಗೋಮುಖ್ಯಾಖ್ಯಶ್ಚಂದ್ರನೀಲಃ ಕಾಮಾಖ್ಯಶ್ಚೇತಿಪರ್ವತಾಃ ।
ಅನ್ಯೇಽಪಿ ಬಹವಃ ಸಂತಿ ತತ್ರ ತತ್ರ ಸಹಸ್ರಶಃ ॥ ೧೧ ॥

ತೇಷಾಂ ನಿತಂಬ ಪ್ರಭವಾಃ ನದ್ಯಃ ಸಂತಿ ನದಾ ಅಪಿ ।
ನದೀ ತಾಮ್ರವತೀನಾಮ್ನೀ ತಾಮ್ರಪರ್ಣೀ ವಟೋದಕಾ ॥ ೧೨ ॥

ಕೃತಮಾಲಾ ಚ ಕಾವೇರೀ ವೈಹಾಯಸ್ಯಪರಾ ನದೀ ।
ವೇಣೀ ಚ ಶರ್ಕರಾ ವಾರ್ತಾ ತುಂಗಭದ್ರಾ ಪಯಸ್ವಿನೀ ॥ ೧೩ ॥

ಕೃಷ್ಣವೇಣೀ ಭೀಮರಥೀ ಗೋದಾವರ್ಯಭಿಧಾ ನದೀ ।
ನಿರ್ವಿಂಧ್ಯಾ ಸುರಸಾ ತಾಪೀ ರೇವಾ ಚರ್ಮಣ್ವತೀ ನದೀ ॥ ೧೪ ॥

ಪಯೋಷ್ಣೀನರ್ಮದಾ ನದ್ಯೌ ಸಿಂಧುಶೋಣೌ ಮಹಾನದೌ ।
ವೇದಸ್ಮೃತಿಸ್ತ್ರಿಧಾಮಾಖ್ಯಾ ಋಷಿಮುಖ್ಯಾಥ ಕೌಶಿಕೀ ॥ ೧೫ ॥

ಮಂದಾಕಿನೀ ಚ ಯಮುನಾ ಗೋಮತೀ ಚ ದೃಷದ್ವತೀ ।
ಸರಸ್ವತೀ ಚ ಸರಯೂ ರೋಧವತ್ಯಥ ಶೋಷಣಾ ॥ ೧೬ ॥

ಸುಶೋಣಾಸತ್ಯವತ್ಯೌ ಚ ಶತಮಾಲಾ ಮರುದ್ವೃಧಾ ।
ಚಂದ್ರಾಭಾಗಾ ಶುತುದ್ರೀ ಚ ವಿತಸ್ತಾ ಶುಕ್ತಿಕಾ ತಥಾ ॥ ೧೭ ॥

---

3 ಮಂಗಲಪ್ರಸ್ಥಃ - ಭಾಗವತ-೫-೧೯-೧೫

4 ಕನಕ - ಭಾಗವತ-೫-೧೯-೧೫

5 ಕೊಲ್ಲಕ - ಭಾಗವತ-೫-೧೯-೧೫

6 ವೇದಗಿರಿಃ - ಭಾಗವತ-೫-೧೯-೧೫

7 ವಾರಿಧಾರ - ಭಾಗವತ-೫-೧೯-೧೫

**ಮಲಾಪಹಾ ಕಕುದ್ಮತ್ಯೌ ವೇದಾ ಚ ಭವನಾಶಿನೀ ।**
**ವಿಶ್ವೇತಿ ಚ ಮಹಾನದ್ಯಃ ಸಂತಿ ಲೋಕಾಘಹಾರಿಕಾಃ[8] ॥ ೧೮ ॥**

**॥ ಇತಿ ಶ್ರೀವಾದೀಂದ್ರವಿರಚಿತ ಭೂಗೋಲೇ ದ್ವಿತೀಯೋಽಧ್ಯಾಯಃ ॥**

ಸಮುದ್ರದವರೆಗೂ ವಿಸ್ತೃತವಾದ ಖಂಡವೇ ಕೇತುಮಾಲಖಂಡ. ಇಲ್ಲಿಯೂ ಕೂಡ ಭಗವಾನ್ ವಿಷ್ಣು ಕಾಮ ಎಂಬ ಹೆಸರಿನ ಕೋಟಿ ಮನ್ಮಥರ ಸದೃಶ ಸೌಂದರ್ಯವುಳ್ಳವನು. ವೇದಾಭಿಮಾನಿಯಾದ ರಮಾದೇವಿಯು ಸೇವಿಸುತ್ತಿರುವಳು. ಭಾರತವರ್ಷದಲ್ಲಿ[ಖ] ಮಲಯ, ಮಂಗಲಪ್ರಸ್ಥ, ಮೈನಾಕ, ತ್ರಿಕೂಟ, ಋಷಭ, ಸನಕ, ಕೋಲ, ಸಹ್ಯ, ಕ್ರೋಡಗಿರಿ, ಋಷ್ಯಮೂಕ, ವೆಂಕಟಾದ್ರಿ, ಶ್ರೀಶೈಲ, ಮಹೇಂದ್ರ, ಗಿರಿಧಾರ, ವಿಂಧ್ಯ, ಶುಕ್ತಿಮಾನ್, ಋಕ್ಷ, ಪಾರಿಯಾತ್ರ, ದ್ರೋಣ, ಚಿತ್ರಕೂಟ, ಗೋವರ್ಧನ, ರೈವತ, ಕಕುಭ, ನೀಲ, ಗೋಮುಖ್ಯ, ಚಂದ್ರನೀಲ, ಕಾಮಾಖ್ಯ ಹೀಗೆ ಇವೇ ಮೊದಲಾದ ಸಾವಿರಾರು ಪರ್ವತಗಳಿವೆ. ಅವುಗಳ ನಿತಂಬ ಪ್ರದೇಶದಿಂದ ಜನರ ಪಾಪಗಳನ್ನು ನಾಶಮಾಡುವ ತಾಮ್ರವತೀ ಇದೇ ಮೊದಲಾದ ಅನೇಕ ಮಹಾನದಿಗಳು, ಮಹಾನದಗಳೂ ಸಹ ಇವೆ. ಚಂದ್ರವಶಾ, ತಾಮ್ರಪರ್ಣೀ, ಅವಟೋದಾ, ಘೃತಮಾಲಾ, ವೈಹಾಯಸೀ, ಕಾವೇರಿ, ಕೃಷ್ಣವೇಣೀ, ಪಯಸ್ವಿನೀ, ಪಯೋದಾ, ಶರ್ಕರಾವರ್ತಾ, ತುಂಗಭದ್ರಾ, ಭೀಮರಥೀ, ಗೋದಾವರೀ, ನಿರ್ವಿಂಧ್ಯಾ, ಪಯೋಷ್ಣೀ, ತಾಪೀ, ರೇವಾ, ಸುರಸಾ, ಚರ್ಮಣ್ವತೀ, ನರ್ಮದಾ, ವೇದವತೀ, ಋಷಿಕುಲ್ಯಾ, ತ್ರಿಸಾಮಾ, ಕೌಶಿಕೀ, ಮಂದಾಕಿನೀ, ಯಮುನಾ, ಸರಸ್ವತೀ, ದೃಷದ್ವತೀ, ಗೋಮತೀ, ಸರಯೂ, ರೋಧಸ್ವತೀ, ಸಪ್ತವತೀ ಘೋಷಣಾ, ಸುಘೋಮಾ, ಶತಮಾಲಾ, ಚಂದ್ರಭಾಗಾ, ಮರುದ್ವೃಧಾ, ವಿತಸ್ತಾ, ಅಸಿಕ್ನೀ, ವಿಶ್ವಾ ಮೊದಲಾದ ನದಿಗಳು, ಸಿಂಧು, ಅಂಧ, ಶೋಣ ಮೊದಲಾದ ನದಗಳು ಹರಿಯುತ್ತಿವೆ.

॥ ಶ್ರೀವಾದೀಂದ್ರತೀರ್ಥ ವಿರಚಿತ ಭೂಗೋಲವರ್ಣನದಲ್ಲಿ ಎರಡನೆಯ ಅಧ್ಯಾಯವು ಮುಗಿಯಿತು ॥



8 ನಾಶನಾ ಎಂದು ಪಾಠಾಂತರ.

ಖ ಭಾಗವತ-೫-೧೯-೧೫

## ತೃತೀಯೋಽಧ್ಯಾಯಃ

ಜಂಬೂದ್ವೀಪಸಮಾನೇನ ಲವಣೋದಧಿನಾವೃತಃ ।
ತಸ್ಮಾದ್ವಿಗುಣವಿಸ್ತೀರ್ಣಃ ಪ್ಲಕ್ಷದ್ವೀಪ ಇತಿ ಸ್ಮೃತಃ ॥ ೧ ॥

ಯತ್ರ ಪ್ಲಕ್ಷತರುರ್ಜಂಬೂ ಸಮಸ್ತದ್ವೀಪನಾಮಕೃತ್ ।
ಹಿರಣ್ಮಯೋಽತ್ರ ಹುತಭುಕ್ ಉಪಾಸ್ತೆ ಹರಿಮವ್ಯಯಮ್ ॥ ೨ ॥

ಇಧ್ಮಜಿಹ್ವೋಽಧಿಪಸ್ತಸ್ಯ ವಿಭಜ್ಯ ಸ ಚ ಸಪ್ತಧಾ ।
ಪುತ್ರೇಭ್ಯೋ ವರ್ಷನಾಮಭ್ಯಃ ಪ್ರಾಯಚ್ಛದ್ ವಿಗತಸ್ಪೃಹಃ ॥ ೩ ॥

[1]ಶಿವಂ ಯಶಸ್ಯಂ ಪರಮಂ ಸುಭದ್ರಂ ಶಾಂತನಾಮಕಮ್ ।
ಕ್ಷೇಮಾಖ್ಯಮಮೃತಂ[2]ವರ್ಷಂ ಅಭಯಾಹ್ವಂ ತು ಸಪ್ತಮಮ್ ॥ ೪ ॥

ಪ್ಲಕ್ಷದ್ವೀಪವು ಎರಡು ಲಕ್ಷ ಯೋಜನ ವಿಸ್ತಾರವಾದದ್ದು. ಇದು ಜಂಬೂದ್ವೀಪವನ್ನು ಆವರಿಸಿದ ಲವಣಸಮುದ್ರವನ್ನು ಆವರಿಸಿದೆ. ಈ ದ್ವೀಪವು ಲವಣಸಮುದ್ರದ ಎರಡರಷ್ಟು ವಿಸ್ತೀರ್ಣ ಹೊಂದಿದೆ. ಈ ದ್ವೀಪದಲ್ಲಿ [೯]ಜಂಬೂವೃಕ್ಷಕ್ಕೆ ಸಮಾನವಾದ ಪ್ಲಕ್ಷ ಎಂಬ ವೃಕ್ಷವಿದೆ. ಈ ವೃಕ್ಷದಿಂದಾಗಿಯೇ ಈ ದ್ವೀಪವು ಪ್ಲಕ್ಷದ್ವೀಪವೆಂದು ಖ್ಯಾತವಾಗಿದೆ. ಇಲ್ಲಿ ಅವ್ಯಯನಾಮಕಭಗವಂತನನ್ನು ಹಿರಣ್ಮಯನಾದ ಸಪ್ತಜಿಹ್ವನಾದ ಅಗ್ನಿಯು ಉಪಾಸನೆ ಮಾಡುತ್ತಾನೆ ॥ ೧-೨ ॥ ಇದರ ಅಧಿಪತಿಯಾದ ಪ್ರಿಯವ್ರತನ ಮಗನಾದ ಇಧ್ಮಜಿಹ್ವನು ಈ ದ್ವೀಪವನ್ನು ಏಳು ವಿಭಾಗ ಮಾಡಿ ಏಳು ವರ್ಷಗಳಿಗೆ ಏಳು ಜನ ಪುತ್ರರಿಗೆ ಕೊಟ್ಟು ಗತಸ್ಪೃಹನಾಗಿದ್ದನು. ಶಿವಖಂಡಕ್ಕೆ ಶಿವನು ಅಧಿಪತಿ. ಮಣಿಕೂಟವು ಗಡಿಪರ್ವತ. ಅರುಣಾನದಿಯು ಅಲ್ಲಿ ಹರಿಯುತ್ತದೆ. ಯಶಸ್ಯ ಎಂಬ ಖಂಡದಲ್ಲಿ ಯಶಸ್ಯನು ಅಧಿಪತಿ. ವಜ್ರಕೂಟಪರ್ವತ ಗಡಿಪರ್ವತ. ನೃಗಣಾ ಎಂಬ ನದಿ. ಸುಭದ್ರಖಂಡಕ್ಕೆ ಸುಭದ್ರನು ಅಧಿಪತಿ. ಇಂದ್ರಸೇನವು ಗಡಿಪರ್ವತ. ಹಾಗೆಯೇ ಶಾಂತಖಂಡಕ್ಕೆ ಶಾಂತನು ಅಧಿಪತಿ.

---

1 ಶಿವಂ ಯಶಸ್ಯಂ ಸುಭದ್ರಂ ಶಾಂತಂ ಕ್ಷೇಮಮಮೃತಮಭಯಮಿತಿ ವರ್ಷಾಣಿ ತೇಷು ಗಿರಯಃ ನದ್ಯಶ್ಚ ಸಪ್ತೈವ ಅಭಿಜ್ಞಾತಾಃ ।

- ಭಾಗವತ-೫-೨೦-೬

2 ಅಪರಂ ಎಂದು ಪಾಠಾಂತರ.

೯ ಜಂಬೂಪ್ರಮಾಣಃ ಏಕಾದಶಶತಯೋಜನೋಚ್ಛ್ರಾಯಃ, ಶಾಖಾಭಿಃ ಏಕಾದಶಶತಯೋಜನವಿತತಃ ಶತಯೋಜನಸ್ಥೂಲಶ್ಚ ...... ವಿಜಯಧ್ವಜೀಯವ್ಯಾಖ್ಯಾ.

ಕ್ಷೇಮಖಂಡಕ್ಕೆ ಕ್ಷೇಮನು ಅಧಿಪತಿ. ಅಮೃತಖಂಡಕ್ಕೆ ಅಮೃತನು ಅಧಿಪತಿ. ಅಭಯಖಂಡಕ್ಕೆ ಅಭಯನು ಅಧಿಪತಿ.

**ಮರ್ಯಾದಾಗಿರಯೋ ನದ್ಯಸ್ತತ್ರ ಸಪ್ತೈವ ಸಂಸ್ಥಿತಾಃ ।**
**[3]ಮಣಿಕೂಟೋ ವಜ್ರಕೂಟೋ ಇಂದ್ರಸೇನಾಚಲಃ ಸ್ಮೃತ ॥ ೫ ॥**

**ಜ್ಯೋತಿಷ್ಮಾನ್ ಧೂಮ್ರವರ್ಣಾಖ್ಯೋ ಹಿರಣ್ಯಗ್ರೀವನಾಮಕಃ ।**
**ಮೇಘಮಾಲ ಇತಿ ಖ್ಯಾತೋ [4]ರುಣಾ ಚಾನುಗುಣಾ* ನದೀ॥ ೬ ॥**

**ಆಂಗೀರಸೀ ಚ ಸಾವಿತ್ರೀ [5]ಸುಪ್ರಜಾತಾ ಋತಂಭರಾ ।**
**ಸತ್ಯಂಭರೇತಿ ಸಪ್ತೈವ ನದ್ಯಃ ಸಂತಿ ಸುಶೋಭನಾಃ ॥ ೭ ॥**

**ಏತದ್ದ್ವೀಪಸ್ಥಿತಾಃ ಸೂರ್ಯಸ್ಥಿತಂ ಹರಿಮುಪಾಸತೇ ।**
**ಸಮಾನೇಕ್ಷುರಸೋದೇನ ಪ್ಲಕ್ಷದ್ವೀಪಃ ಸಮಾವೃತಃ ॥ ೮ ॥**

ಈ ಏಳು ವರ್ಷಗಳಿಗೆ ಏಳು ಗಡಿಪರ್ವತಗಳು, ಏಳು ನದಿಗಳೂ ಇವೆ. ಮಣಿಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಧೂಮ್ರವರ್ಣ, ಹಿರಣ್ಯಗ್ರೀವ, ಮೇಘಮಾಲ ಎಂದು ಪ್ರಸಿದ್ಧವಾದ ಪರ್ವತಗಳಿವೆ. ಅರುಣಾ, ಅನುಗುಣಾ, ಆಂಗೀರಸೀ, ಸಾವಿತ್ರೀ, ಸುಪ್ರಭಾತಾ, ಋತಂಭರಾ ಮತ್ತು ಸತ್ಯಂಭರಾ ಎಂಬ ಏಳೇ ಶೋಭನವಾದ ಮಹಾನದಿಗಳು ಈ ಖಂಡಗಳಲ್ಲಿ ಕ್ರಮವಾಗಿ ಹರಿಯುತ್ತಾ ಇವೆ. ಈ ದ್ವೀಪದಲ್ಲಿರುವವರು ಸೂರ್ಯಸ್ಥನಾದ ಭಗವಂತನನ್ನು ಉಪಾಸನೆ ಮಾಡುತ್ತಾರೆ. ಇಂತಹ ಪ್ಲಕ್ಷದ್ವೀಪವನ್ನು ಎರಡು ಲಕ್ಷ ಯೋಜನ ಪರಿಮಿತವಾದ ಇಕ್ಷುರಸ ಸಮುದ್ರವು ವಲಯಾಕಾರವಾಗಿ ಸುತ್ತುವರೆದಿದೆ.[ಖ]

**ತತೋ ದ್ವಿಗುಣ ವಿಸ್ತೀರ್ಣಃ ಶಾಲ್ಮಲೀ ದ್ವೀಪ ಈರಿತಃ ।**
**ತತ್ರೈವ ಶಾಲ್ಮಲೀವೃಕ್ಷೋ ಯಾಮ್ಯಾ ಯಸ್ಯಾಂ ಗುರುತ್ಮತಃ ॥ ೯ ॥**

**ನಿವಾಸೋಽಧಿಪತಿಸ್ತಸ್ಯ ಯಜ್ಞಬಾಹುರ್ವಿಭಜ್ಯ ತಮ್ ।**
**ಪುತ್ರನಾಮಾನಿ ವರ್ಷಾಣಿ ಪುತ್ರೇಭ್ಯಃ ಸಪ್ತ ಸಂದದೌ ॥ ೧೦ ॥**

**ಸುರೋಚನಂ ಸೌಮನಸ್ಯಂ ತಥಾ ರಮಣಾಹ್ವಯಮ್ ।**
**ದೇವಬರ್ಹಂ ಪಾರಿಭದ್ರಂ ಅಭಿಬರ್ಹಮಥಾಪರಂ ॥ ೧೧ ॥**

---

3 ಮಣಿಕೂಟೋ ವಜ್ರಕೂಟ ಇಂದ್ರಸೇನೋ, ಜ್ಯೋತಿಷ್ಮಾನ್ ।
ಧೂಮ್ರವರ್ಣೋ ಹಿರಣ್ಯಗ್ರೀವೋ ಮೇಘಮಾಲ ಇತಿ ಸೇತುಶ್ಶೈಲಾಃ ॥
- ಭಾಗವತ-೫-೨೦-೭

4 ಅರುಣಾಽನುಗುಣಾಽಂಗಿರಸೀ ಸಾವಿತ್ರೀ ಸುಪ್ರಭಾತಾ ಋತಂಭರಾ ಸತ್ಯಂಭರೇತಿ ಮಹಾನದ್ಯಃ ।
- ಭಾಗವತ-೫-೨೦-೮

5 ಸುಪ್ರಭಾತಾ ಎಂದು ಪಾಠಾಂತರ - ಭಾಗವತ

ಖ ಪ್ಲಕ್ಷಃ ಸ್ವಸಮಾನೇನ (ಸುರಸೋದೇನಾವೃತ) ಇಕ್ಷುರಸೋದೇನಾವೃತಃ ।
- ಭಾಗವತ-೫-೨೦-೧೨

* ವಿಮಲಾ ಎಂದು ಪಾಠಾಂತರವಿದೆ.

**ಆಪ್ಯಾಯತಮಿತಿಖ್ಯಾತಂ ಸಪ್ತಮಂ ತತ್ರ ಪರ್ವತಾಃ ।**
**ಸುರಸಃ ಶತಶೃಂಗೋಥ ವಾಮದೇವೋಥ ಕುಂದಕಃ ॥ ೧೨ ॥**

**ಮುಕುಂದಃ ಪುಷ್ಪವರ್ಷಶ್ಚ ಸಹಶ್ರುತಿರಿತೀರಿತಾಃ ।**
**ನದೀ ತ್ವನುಮತಿರ್ನಾಮ ಸಿನೀವಾಲೀ ಸರಸ್ವತೀ ॥ ೧೩ ॥**

**ಕುಹೂ ರಸಕುಲ್ಯಾ[6]ನಂದಾ ರಸಾಖ್ಯಾ ಸಪ್ತಮೀ ನದೀ ।**
**ತದ್ದ್ವೀಪಪುರುಷಾಃ ಸೋಮಗತಂ ಹರಿಮುಪಾಸತೇ ॥ ೧೪ ॥**

ಇಕ್ಷುಸಮುದ್ರದ ಎರಡು ಪಟ್ಟು ವಿಸ್ತೀರ್ಣವುಳ್ಳ ಶಾಲ್ಮಲೀ ದ್ವೀಪವು ಇಕ್ಷುಸಮುದ್ರವನ್ನು ಸುತ್ತುವರೆದಿದೆ. ಇದರ ವಿಸ್ತೀರ್ಣ ನಾಲ್ಕು ಲಕ್ಷ ಯೋಜನ ವಿಸ್ತೀರ್ಣ. ಪಕ್ಷಿರಾಜನಾದ ಗರುಡನಿಗೆ ಆಶ್ರಯಸ್ಥಾನವಾದ ಶಾಲ್ಮಲೀ ವೃಕ್ಷವಿದೆ. ಇದರಿಂದಲೇ ಈ ದ್ವೀಪ ಶಾಲ್ಮಲೀ ದ್ವೀಪವೆನಿಸಿದೆ ॥ ೯ ॥

ಇದರ ಅಧಿಪತಿಯಾದ ಯಜ್ಞಬಾಹು ಈ ದ್ವೀಪವನ್ನು ಏಳು ಭಾಗಗಳಾಗಿ ವಿಭಜಿಸಿ ತನ್ನ ಪುತ್ರರಾದ ಸುರೋಚನ, ಸೌಮನಸ್ಯ, ರಮಣಕ, ದೇವಬರ್ಹ, ಪಾರಿಭದ್ರ, ಅಭಿಬರ್ಹ, ಅಪ್ಯಾಯತ ಎಂಬ ಏಳುಜನರಿಗೆ ಕೊಟ್ಟನು. ಆ ಭಾಗಗಳು ಅವರ ಹೆಸರಿನಿಂದಲೇ ಕರೆಯಲ್ಪಡುವ ಸಪ್ತಖಂಡಗಳಾದವು. ಆ ಖಂಡಗಳಲ್ಲಿ ಸುರಸ, ಶತಶೃಂಗ, ವಾಮದೇವ, ಕುಂದಕ, ಮುಕುಂದ, ಪುಷ್ಪವರ್ಷ ಹಾಗೂ ಸಹಶ್ರುತಿ ಎಂಬ ಏಳು ಪರ್ವತಗಳಿವೆ. ಹಾಗೆಯೇ ಅನುಮತಿ, ಸಿನೀವಾಲೀ, ಸರಸ್ವತೀ, ಕುಹೂ, ರಸಕುಲ್ಯಾ, ನಂದಾ, ರಾಕಾ ಎಂಬ ಏಳು ನದಿಗಳು ಹರಿಯುತ್ತವೆ. ಅಲ್ಲಿರುವ ಪುರುಷರು[ಗ] ವೇದಮಯನಾದ ಸೋಮಾಂತಸ್ಥನಾದ ಸೋಮನಾಮಕನಾದ ಭಗವಂತನನ್ನು ಉಪಾಸನೆ ಮಾಡುತ್ತಾರೆ ॥ ೧೦-೧೪ ॥

**ಸ್ವಸಮಾನಸುರೋದೇನ ಹ್ಯಯಂ ದ್ವೀಪಃಸಮಾವೃತಃ ।**
**ತಸ್ಮಾದ್ ದ್ವಿಗುಣವಿಸ್ತೀರ್ಣಃ ಕುಶದ್ವೀಪ ಉದಾಹೃತಃ ॥ ೧೫ ॥**

**ಕುಶಸ್ತಂಬೋ ದೇವಕೃತೋ ಯತ್ರ ತದ್ದ್ವೀಪನಾಮಭೃತ್ ।**
**ಹಿರಣ್ಯರೇತಾ ಅಧಿಪಃ ಪುತ್ರೇಭ್ಯಃ ಸಮದಾತ್ ಸ್ವಯಂ ॥ ೧೬ ॥**

**ವಿಭಜ್ಯ ಸಪ್ತವರ್ಷಾಣಿ ಪುತ್ರನಾಮಾಂಕಿತಾನಿ ಹಿ ।**
**ಪ್ರಥಮಂ ವಸುದಾನಾಹ್ವಂ ದೃಢಂ ಚ ರುಚಿನಾಮಕಮ್ ॥ ೧೭ ॥**

---

6 ರಜನೀ ಎಂದು ಪಾಠಾಂತರವಿದೆ.

ಗ ತದ್ವರ್ಷಪುರುಷಾಃ ಶ್ರುತಧರ, ವೀರ್ಯಧರ, ವಸುಂಧರದ್ಯುಧರಸಂಜ್ಞಾಃ ।
- ಭಾಗವತ-೫-೨೦-೧೭

**ವಸುಂಧರೇಷುಧರಸಂಜ್ಞಾಃ** ಎಂಬ ಪಾಠಾಂತರವೂ ಇದೆ.
**ವಸುಂಧರೋಧ್ವಧರ** ಎಂಬ ಪಾಠವೂ ಇದೆ.

**ನಾಭಿಗುಪ್ತಂ ತಥಾ ಸತ್ಯವ್ರತಂ ವಿಪ್ರಾಖ್ಯಮೇವ ಚ ।**
**ವಿರದೇವಸ್ತೇಷು ಸೀಮಾಗಿರಯಃ ಸಪ್ತ ಚಾಪಗಾಃ ॥ ೧೮ ॥**

**ಚಕ್ರಾಖ್ಯಃ ಕಪಿಲಃ ಶೃಂಗಶ್ಚಿತ್ರಕೂಟೋಽಪರಸ್ತಥಾ ।**
**ದೇವಾನೀತಸ್ತೂರ್ಧ್ವರೋಮಾ ದ್ರವಿಣಃ ಸಪ್ತಮಃ ಸ್ಮೃತಃ ॥ ೧೯ ॥**

**ರಸಕುಲ್ಯಾ ಮಧುಕುಲ್ಯಾ ಶ್ರುತವಿಂದಾಭಿಧಾ ನದೀ ।**
**ಮಿತ್ರವಿಂದಾ ದೇವಗರ್ಭಾ ಘೃತಚ್ಯುತ ಸಮಾಹ್ವಯಾ ॥ ೨೦ ॥**

**ಮಂತ್ರಮಾಲೇತಿ ಸರಿತಃ ಸಪ್ತಪಾವನತೋಯಕಾಃ ।**
**ಕುಶದ್ವೀಪಸ್ಥಿತಾ ವಹ್ನಿಸ್ಥಿತಂ ಹರಿಮುಪಾಸತೇ ॥ ೨೧ ॥**

ಈ ಶಾಲ್ಮಲೀ ದ್ವೀಪವು ತನ್ನ ಪ್ರಮಾಣದಷ್ಟೇ ಪ್ರಮಾಣವುಳ್ಳ ನಾಲ್ಕು ಲಕ್ಷ ಯೋಜನ ವಿಸ್ತೀರ್ಣವುಳ್ಳ ಸುರಾಸಮುದ್ರದಿಂದ ಆವೃತವಾಗಿದೆ. ಅದಕ್ಕಿಂತ ದ್ವಿಗುಣಿತವಾದ ಅರ್ಥಾತ್ ಎಂಟು ಲಕ್ಷ ಯೋಜನ ವಿಸ್ತೀರ್ಣವುಳ್ಳ ಕುಶದ್ವೀಪವಿದೆ, ಪ್ರಥಿತವಾಗಿದೆ. ಈ ದ್ವೀಪಕ್ಕೆ ಅಧಿಪತಿಯಾದ ಹಿರಣ್ಯರೇತಸ್ಸು ತನ್ನ ಸುಪ್ತಪುತ್ರರಿಗೆ ಸ್ವತಃ ತಾನೇ ಏಳು ಭಾಗ ಮಾಡಿ ಹಂಚಿದನು. ಆ ಏಳು ವರ್ಷಗಳು ಅವರ ಹೆಸರಿನಿಂದಲೇ ಪ್ರಸಿದ್ಧವಾದವು. ವಸುದಾನ, ದೃಢ, ರುಚಿ, ನಾಭಿಗುಪ್ತ ಸತ್ಯವ್ರತ, ವಿಪ್ರ ವೀರದೇವ (ವಾಮದೇವ) ಎಂದು ಏಳು ವರ್ಷಗಳು. ಅವುಗಳಲ್ಲಿ ಚಕ್ರ, ಕಪಿಲ, ಶೃಂಗ, ಚಿತ್ರಕೂಟ, ದೇವಾನೀತ, ಊರ್ಧ್ವರೋಮ ಮತ್ತು ದ್ರವಿಣ ಎಂಬ ಏಳು ಪರ್ವತಗಳಿವೆ. ರಸಕುಲ್ಯಾ, ಮಧುಕುಲ್ಯಾ, ಶ್ರುತವಿಂದಾ, ಮಿತ್ರವಿಂದಾ, ದೇವಗರ್ಭಾ, ಘೃತಚ್ಯುತಾ ಮತ್ತು ಮಂತ್ರಮಾಲಾ ಎಂಬ ನದಿಗಳು ಹರಿಯುತ್ತವೆ. ಇವುಗಳು ಪರಮಪಾವನವಾಗಿದೆ. ಈ ಕುಶದ್ವೀಪದಲ್ಲಿರುವ ಕುಶಲ, ಕೋವಿದ, ಅಭಿಯುಕ್ತ, ಕುಲಶ ಎಂಬ ಸಂಜ್ಞೆಗಳು, ಬ್ರಾಹ್ಮಣಾದಿಸ್ಥಾನೀಯರಾದ ನಾಲ್ಕು ವರ್ಣದವರು ಅಗ್ನಿಸ್ಥವಾದ ಅಗ್ನಿಸ್ವರೂಪಿಯಾದ ಭಗವಂತನನ್ನು "**ಪರಸ್ಯ ಬ್ರಹ್ಮಣಃ ಸಾಕ್ಷಾತ್ ಜಾತವೇದೋಸಿ ಹವ್ಯವಾಟ್ । ದೇವಾನಾಂ ಪುರುಷಾಂಗಾನಾಂ ಯಜ್ಞೇನ ಪುರುಷಂ ಯಜ ॥ ೫-೨೦-೨೩**" ಇತ್ಯಾದಿ ಭಾಗವತೋಕ್ತ ವಚನಗಳಿಂದ ಉಪಾಸನೆ ಮಾಡುತ್ತಿರುವರು ॥ ೧೫-೨೧ ॥

**ಕುಶದ್ವೀಪಸಮಾನೇನ ಘೃತೋದೇನಾವೃತಸ್ತತಃ ।**
**ಕ್ರೌಂಚದ್ವೀಪೋ ದ್ವಿಗುಣಿತೋ ಯತ್ರ ಕ್ರೌಂಚೋ ಮಹಾಚಲಃ ॥ ೨೨ ॥**

**ಘೃತಪೃಷ್ಠೋಽಧಿಪಸ್ತಸ್ಯಾಮೋದೋಮಧುರುಹಾಹ್ವಯಃ ।**
**ಮೇದಪೃಷ್ಠ ಸುದಾಮಾಖ್ಯೋ ಭ್ರಾಜಿಷ್ಠೋ ಲೋಹಿತಾರ್ಣಕಃ ॥ ೨೩ ॥**

**ವನಸ್ಪತಿರಿತಿಖ್ಯಾತಾಃ ಪುತ್ರಾಸ್ತೇಭ್ಯೋ ವಿಭಜ್ಯ ಸಃ ।**
**ಸಪ್ತವರ್ಷಾಣಿ ತನ್ನಾಮ್ನಾ ವಾಚ್ಯಾನಿ ಪ್ರದದೌ ನೃಪಃ ॥ ೨೪ ॥**

ಶುಕ್ಲಾಖ್ಯೋ ವರ್ಧಮಾನಾಖ್ಯಃ ಉಪಬರ್ಹಣನಾಮಕಃ ।
ಉಪಭೋಜನನೋನಂದನಾಮಾ ನಂದನಶ್ಚಾಪರಃ ಸ್ಮೃತಃ ॥ ೨೫ ॥
ಸರ್ವತೋ ಭದ್ರ ಇತಿ ತೇಷ್ವಚಲಾ ವರ್ಷಭೇದಕಾಃ ।
ಅಭಯಾ ತ್ವಮೃತೌಘಾಖ್ಯಾ ದರ್ಪಶಾಖ್ಯಾ ಪರಾ ಸ್ಮೃತಾ ॥ ೨೬ ॥
ನದೀ ತೀರ್ಥವತೀ ತೃಪ್ತೀರೂಪವತ್ಯಾಭಿಧಾ ಪರಾ ।
ಪವಿತ್ರಾ ಶುಕ್ಲವತ್ಯಾಖ್ಯಾ ನದ್ಯಃ ಸಪ್ತ ವಸಂತಿ ಹಿ ॥ ೨೭ ॥

ಪರಿಮಿತಿಯಲ್ಲಿ ಕುಶದ್ವೀಪಕ್ಕೆ ಸಮಾನವಾದ ಘೃತಸಮುದ್ರವು ಕುಶದ್ವೀಪವನ್ನು ಆವರಿಸಿದೆ. ಈ ಘೃತಸಮುದ್ರವನ್ನು ಆವರಿಸಿ ಕುಶದ್ವೀಪದ ಎರಡರಷ್ಟು ಅಂದರೆ ೧೬,೦೦೦ ಯೋಜನ ವಿಸ್ತೀರ್ಣವುಳ್ಳ ಕ್ರೌಂಚವೆಂದು ಖ್ಯಾತವಾದ ದ್ವೀಪವಿದೆ. ಈ ದ್ವೀಪವನ್ನು ಅಷ್ಟೇ ಪ್ರಮಾಣದ ದಧಿಸಮುದ್ರವು ಸುತ್ತುವರೆದಿದೆ. ಈ ಕ್ರೌಂಚದ್ವೀಪದಲ್ಲಿ ಕ್ರೌಂಚವೆಂಬ ಮಹಾಪರ್ವತವಿದೆ. ಆದ್ದರಿಂದಲೇ ಈ ದ್ವೀಪವು ಕ್ರೌಂಚದ್ವೀಪ ಎಂದು ಪ್ರಸಿದ್ಧವಾಗಿದೆ. ಇದರ ಅಧಿಪತಿಯಾದ ಘೃತಪೃಷ್ಠ ಎಂಬ ರಾಜನು ಆಮೋದ, ಮಧುರುಹ, ಮೇದಪೃಷ್ಠ, ಸುದಾಮ,ಭ್ರಾಜಿಷ್ಠ, ಲೋಹಿತಾರ್ಣಕ ಹಾಗೂ ವನಸ್ಪತಿ ಎಂಬ ಪ್ರಸಿದ್ಧರಾದ ತನ್ನ ಸಪ್ತ ಪುತ್ರರಿಗೆ ಈ ದ್ವೀಪವನ್ನು ವಿಭಾಗಿಸಿಕೊಟ್ಟನು. ಆ ಸಪ್ತ ವರ್ಷಗಳು ಅವರ ಹೆಸರುಗಳಿಂದಲೇ ಪ್ರಸಿದ್ಧವಾದವು. ಶುಕ್ಲ, ವರ್ಧಮಾನ, ಉಪಬರ್ಹಣ, ಉಪಭೋಜನ, ನಂದ, ನಂದನ, ಸರ್ವತೋಭದ್ರ ಎಂಬ ಏಳು ಗಡಿಪರ್ವತಗಳು ಈ ದ್ವೀಪದಲ್ಲಿವೆ. ಅಭಯಾ, ಅಮೃತೌಘಾ, ದರ್ಪತಾ, ತೀರ್ಥವತೀತೃಪ್ತೀ, ರೂಪವತೀ, ಶುಕ್ಲವತೀ ಎಂಬ ಪವಿತ್ರವಾದ ಏಳು ನದಿಗಳಿವೆ. ಇಂತಹ ಕ್ರೌಂಚದ್ವೀಪದಲ್ಲಿ [ಘ]ಗುರು, ಋಷಭ, ದ್ರವಿಣ, ದೇವಕ ಎಂಬ ಹೆಸರಿನ ವರ್ಣದವರಾದ ಪುರುಷರು ಜಲಸ್ಥನಾದ ಭಗವಂತನನ್ನು ಉಪಾಸನೆ ಮಾಡುತ್ತಾರೆ. ಇಂತಹ ಕ್ರೌಂಚದ್ವೀಪವು ತನಗೆ ಸಮಾನವಾದ ಪರಿಮಿತಿಯುಳ್ಳ ದಧಿಸಮುದ್ರದಿಂದ ಸುತ್ತುವರೆಯಲ್ಪಟ್ಟಿದೆ ॥ ೨೨-೨೮ ॥

ಕ್ರೌಂಚದ್ವೀಪಗತಾ ವಾರಿಸ್ಥಿತಂ ಹರಿಮುಪಾಸತೇ ।
ಕ್ರೌಂಚೋ ದಧಿಸಮುದ್ರೇಣ ಸಮಾನೇನ ಸಮಾವೃತಃ ॥ ೨೮ ॥
ದ್ವಾತ್ರಿಂಶಲ್ಲಕ್ಷವಿಸ್ತೀರ್ಣ ಶಾಕದ್ವೀಪಸ್ತತಃ ಸ್ಮೃತಃ ।
ಶಾಕನಾಮಾऽವನಿರುಹೋ ಯತ್ರ ತತ್ಕ್ಷೇತ್ರನಾಮಕೃತ್ ॥ ೨೯ ॥
ಪತಿರ್ಮೇಧಾತಿಥಿಸ್ತಸ್ಯ ಸಪ್ತವರ್ಷಾಣ್ಯದಾತ್ ಸ್ವಯಮ್ ।
ತನ್ನಾಮಾಂಕಿತಪುತ್ರೇಭ್ಯಃ ಪುರೋಜವ ಮನೋಜವೌ ॥ ೩೦ ॥

---

ಘ ಯಾಸಾಂ ಅಂಭಃ ಪವಿತ್ರಮುಪಯುಂಜಾನಾ ಗುರುಋಷಭದ್ರವಿಣ ದೇವಕ ಸಂಜ್ಞಾಃ ।
ವರ್ಷಪುರುಷಾಃ ಅಮ್ಮಯಂ ದೇವಂ ಅಪಾಂಪೂರ್ಣೇನಾಂಜಲಿನಾ ಯಜಂತೇ ॥
- ಭಾಗವತ-೫-೨೦-೨೮

ವೇಪಮಾನಾಭಿಧೋ ಧೂಮ್ರಾನೀಕಾಖ್ಯಶ್ಚಿತ್ರರೇಫಕಃ ।
ಬಹುರೂಪೋ ವಿಶ್ವಧಾರೊ ಮೇಧಾತಿಥಿಸುತಾ ಇಮೆ ॥ ೩೧ ॥

ಈಶಾನ ಉರುಶೃಂಗಾಖ್ಯೇ ಜಲಭದ್ರಾಭಿಧಸ್ತಥಾ ।
ಶತಕೇಸರ ಸಾಹಸ್ರೌ ದೇವಪಾಲೋ ಮಹಾಸನ ॥ ೩೨ ॥

ಏತೇ ವರ್ಷಾಚಲಾಸ್ತತ್ರ ತಥಾಯುರ್ದಾ ನದೀ ಮುದಾ ।
ಉಪಪಸ್ಸೃಷ್ಟಿರಪರಾ ಜಿತಾ ಪಂಚಪದೀ ತಥಾ ॥ ೩೩ ॥

ಸಹಸ್ರಶ್ರುತಿರ್ನಿಜಧೃತಿಃ ನದ್ಯಃ ಸಪ್ತೇತಿ ಸಂಸ್ಥಿತಾಃ ।
ಭಜಂತೆ ತದ್ವರ್ಷಜನಾಃ ವಾಯುಸ್ಥಿತರಮಾಪತಿಮ್ ॥ ೩೪ ॥

ಶಾಕದ್ವೀಪಸ್ತತ್ಪ್ರಮಾಣಃ ಕ್ಷೀರವಾರಿಧಿನಾ ವೃತಃ ।
ತತೋ ದ್ವಿಗುಣವಿಸ್ತೀರ್ಣ ಪುಷ್ಕರದ್ವೀಪ ಆಸ್ತಿತಃ ॥ ೩೫ ॥

ಸ್ವರ್ಣಪತ್ರಚ್ಯುತಸ್ತತ್ರ ಬೃಹತ್ ಪುಷ್ಕರಮಾಸ್ಥಿತಮ್ ।
ಮಾನಸೋತ್ತರಶೈಲೇಽಸ್ಮಿನ್ ವಲಯಾಕೃತಿರಾಸ್ಥಿತಃ ॥ ೩೬ ॥

ಅರ್ವಾಚೀನ ಪರಾಚೀನ ವರ್ಷದ್ವಯವಿಭಾಜಕಃ ।
ಅಯುತಯೋಜನ ವಿಸ್ತೀರ್ಣಸ್ತಾವತ್ತೈವ ಸಮಂತತಃ ॥ ೩೭ ॥

ಇಂದ್ರಾದಿಲೋಕಪಾಲಾಶ್ಚ ಚತುರ್ದಿಶಮವಸ್ಥಿತಾಃ ।
ಪುನಶ್ಚತತ್ರ ಸೂರ್ಯಸ್ಯ ರಥಚಕ್ರಮವಸ್ಥಿತಃ ॥ ೩೮ ॥

ವೀತಿಹೋತ್ರೋಽಧಿಪಸ್ತಸ್ಯ ವರ್ಷದ್ವಯಮುದಾನ್ನೃಪಃ ।
ಸ್ವರ್ಗಧೌತಕನಾಮಭ್ಯಾಂ ಪುತ್ರಾಭ್ಯಾಂ ತತ್ರ ಸಂಸ್ಥಿತಃ ॥ ೩೯ ॥

ಚತುರ್ಮುಖಗತಂ ವಿಷ್ಣುಂ ಭಜಂತೇ ಪರಮಾದರಾತ್ ।
ಏಷ ಸ್ವತುಲ್ಯಶುದ್ಧೋದಸಮುದ್ರೇಣ ಸಮಾವೃತಃ ॥ ೪೦ ॥

ಚತುರ್ಲಕ್ಷವಿಹೀನೈಕಕೋಟಿಃ ಸ್ವರ್ಣಾವನಿಸ್ತತಃ ।
ಲೋಕಾಲೋಕಾಚಲಸ್ತಸ್ಮಾತ್ ಪಂಚಾಶಲ್ಲಕ್ಷವಿಸ್ತೃತಃ ॥ ೪೧ ॥

ಸಪಂಚಾಶತ್ಸಹಸ್ರಶ್ಚ ಲೋಕಾಲೋಕೋತ್ತರಾಂಗಣಮ್ ।
ತಮಸ್ತತೋ ಲಕ್ಷಹೀನೈಃ ಕೋಟಿಸಪ್ತಕಮಾವೃತಮ್ ॥ ೪೨ ॥

ಘನೋದಕಂ ತದ್ದ್ವಿಗುಣಂ ತದಂತೇ ಧಾಮ ವೈಷ್ಣವಮ್ ।
ಮೇರೋಶ್ಚತುರ್ದಿಶಂ ತ್ವೇವಂ ಕೋಟಯಃ ಪಂಚವಿಂಶತಿಃ ॥ ೪೩ ॥

॥ ಇತಿ ಶ್ರೀವಾದೀಂದ್ರವಿರಚಿತ ಭೂಗೋಲೆ ತೃತೀಯೋಽಧ್ಯಾಯಃ ॥

ಶಾಕದ್ವೀಪವು ೩೨ ಲಕ್ಷ ಯೋಜನ ವಿಸ್ತಾರವಾದುದು. ದಧಿಸಮುದ್ರವನ್ನು ಈ ದ್ವೀಪವು ಸುತ್ತುವರೆದಿದ್ದು, ಶಾಕ ಎಂಬ ವೃಕ್ಷವು ಈ ದ್ವೀಪದಲ್ಲಿರುವುದು. ಆದ್ದರಿಂದಲೇ ಈ ದ್ವೀಪಕ್ಕೆ ಶಾಕದ್ವೀಪ ಎಂದು ಹೆಸರು. ಈ ದ್ವೀಪದ ಅಧಿಪತಿಯಾದ ಮೇಧಾತಿಥಿಯು ಈ ದ್ವೀಪವನ್ನು ಏಳು ವಿಭಾಗ ಮಾಡಿದನು. ಪುರೋಜವ, ಮನೋಜವ, ವೇಪಮಾನ, ಧೂಮ್ರಾನೀತ, ಚಿತ್ರರೇಫಕ, ಬಹುರೂಪ, ವಿಶ್ವಧಾರ ಎಂಬ ತನ್ನ ಏಳು ಮಕ್ಕಳಿಗೆ ಈ ವರ್ಷಗಳನ್ನು ಕೊಟ್ಟನು. ಅವರ ಹೆಸರಿನಿಂದಲೇ ಈ ಏಳು ಖಂಡಗಳು ಪ್ರಸಿದ್ಧವಾದವು ॥ ೨೯-೩೧ ॥

ಈ ಏಳು ಖಂಡಗಳಲ್ಲಿ [ಜ]ಈಶಾನ, ಉರಂಶೃಂಗ, ಜಲಭದ್ರ, ಶತಕೇಸರ, ಸಾಹಸ್ರ, ದೇವಪಾಲ, ಮಹಾಸನ ಎಂಬ ಏಳು ಪರ್ವತಗಳಿವೆ ॥ ೩೨ ॥

ಹಾಗೆಯೇ ಆಯುರ್ದಾ, ಮುದಾ, ಉಪಪಸ್ಪೃಷ್ಟಿ, ಜಿತಾ, ಪಂಚನದೀ, ಸಹಸ್ತ್ರುತಿ ಮತ್ತು ನಿಜಧೃತಿ ಎಂಬ ಏಳು ನದಿಗಳು[ಚ] ಈ ಶಾಕದ್ವೀಪದಲ್ಲಿ ಇವೆ ॥ ೩೨-೩೩ ॥

ಈ ದ್ವೀಪದಲ್ಲಿರುವ ಜನರು ವಾಯುರೂಪಿಯಾದ ಭಗವಂತನನ್ನು ಪ್ರಾಣಾಯಾಮದಿಂದ ವಿಧೂತರಜಸ್ತಮಸ್ಕರಾಗಿ ಉಪಾಸನೆ ಮಾಡುತ್ತಾರೆ. ಇಂತಹ ಶಾಕದ್ವೀಪವು ಅದೇ ಪ್ರಮಾಣವುಳ್ಳ ಅಂದರೆ ೩೨ ಲಕ್ಷ ಯೋಜನವುಳ್ಳ ಕ್ಷೀರಸಮುದ್ರದಿಂದ ಸುತ್ತುವರೆಯಲ್ಪಟ್ಟಿದೆ. ಇಂತಹ ಶಾಕದ್ವೀಪದ ಎರಡರಷ್ಟು ಪ್ರಮಾಣವುಳ್ಳ ೬೪ ಲಕ್ಷ ಯೋಜನ ವಿಸ್ತಾರವಿರುವ ಪುಷ್ಕರದ್ವೀಪವು ಕ್ಷೀರಸಾಗರವನ್ನು ಸುತ್ತುವರೆದಿದೆ. ಈ ದ್ವೀಪದಲ್ಲಿ ಅಗ್ನಿಯಂತೆ ಪರಿಶುದ್ಧವಾದ ಕನಕಪತ್ರಗಳಿವೆ. ಬೃಹದಾಕಾರದ ಪುಷ್ಕರವಿದೆ. ಆದ್ದರಿಂದಲೇ ಈ ದ್ವೀಪವು ಪುಷ್ಕರದ್ವೀಪ ಎನಿಸಿದೆ. ಈ ದ್ವೀಪದಲ್ಲಿ ಮಾನಸೋತ್ತರ ಎಂಬ ಹೆಸರಿನ ಒಂದೇ ಪರ್ವತವು ಅರ್ವಾಚೀನ-ಪರಾಚೀನ ವರ್ಷಗಳನ್ನು ವಿಭಜಿಸುವ ಗಡಿಪರ್ವತವಿದೆ. ಹತ್ತು ಸಾವಿರ ಯೋಜನ ವಿಸ್ತೀರ್ಣವುಳ್ಳದ್ದಾಗಿದೆ. ಈ ಎರಡು ಖಂಡಗಳಿಗೆ [ಛ]ರಮಣಕ ಹಾಗೂ [ಜ]ಬಹಪೋಧಾತಕ ಎಂದು ಹೆಸರುಗಳಿವೆ. ಈ ಮಾನಸೋತ್ತರ ಪರ್ವತದಲ್ಲಿ ಸೂರ್ಯದ ರಥಚಕ್ರವು ಚಲಿಸುತ್ತದೆ. ಇದು ಸ್ವರ್ಣಮಯವಾಗಿದ್ದು ಸುತ್ತಲೂ ದಿಕ್ಕುಗಳನ್ನು ಪ್ರಕಾಶಿಸುತ್ತದೆ. ಶಿಂಶುಮಾರ ಸ್ವರೂಪದಿಂದಿರುವ ಶ್ರೀಹರಿಯಿಂದ ಪ್ರವರ್ತಿತವಾದುದು. ಈ ದ್ವೀಪದಲ್ಲಿ ಇಂದ್ರಾದಿಲೋಕಪಾಲರು ನಾಲ್ಕು ದಿಕ್ಕುಗಳನ್ನು ಆಶ್ರಯಿಸಿರುವರು. ಈ

---

[ಜ] **ಈಶಾನಃ, ಉರುಶೃಂಗಃ, ಬಲಭದ್ರ, ಶತಕೇಸರ, ಸಹಸ್ರಸ್ರೋತಾ, ದೇವಪಾಲ, ಮಹಾನಸಃ ಏತೆ ವರ್ಷಪರ್ವತಾ ।**

- ಶ್ರೀಸುಮತೀಂದ್ರವಿರಚಿತ ಭೂಗೋಲಸಂಗ್ರಹೇ

[ಚ] **ಅನಘಾ, ಯುವಾ, ಉಪಸ್ಪರ್ಶಾ, ಅಪರಾಜಿತಾ, ಪಂಚನದೀ, ಸಹಸ್ರುತಿ, ನಿರುಜಾಧೃತಿ, ಇತಿ ನದ್ಯಃ ।**

- ಶ್ರೀಸುಮತೀಂದ್ರವಿರಚಿತ ಭೂಗೋಲಸಂಗ್ರಹೇ

[ಛ-ಜ] ಈ ಹೆಸರುಗಳ ಉಲ್ಲೇಖವು ಶ್ರೀಸುಮತೀಂದ್ರತೀರ್ಥರ ಭೂಗೋಲಸಂಗ್ರಹದಲ್ಲಿವೆ. ಭಾಗವತದಲ್ಲಿ ರಮಣ ಹಾಗೂಧಾತಕ ಎಂದು ಇದೆ.

ದ್ವೀಪ ಎರಡು ವರ್ಷಗಳ ಅಧಿಪನಾದ ವೀತಿಹೋತ್ರನೆಂಬ ರಾಜನು ಸ್ವರ್ಗ, ಧೌತಕ ಎಂಬ ಮಕ್ಕಳಿಗೆ ಇವುಗಳನ್ನು ಕೊಟ್ಟನು. ಇಲ್ಲಿರುವವರು ಚತುರ್ಮುಖ ಬ್ರಹ್ಮನ ಅಂತರ್ಗತನಾದ ಬ್ರಹ್ಮರೂಪಿಯಾದ ವಿಷ್ಣುವನ್ನು ಪರಮಾದರದಿಂದ ಭಜಿಸುತ್ತಾರೆ. ಈ ಪುಷ್ಕರ ದ್ವೀಪವು ತನ್ನ ಪರಿಮಾಣದಷ್ಟೇ ಪರಿಮಾಣವುಳ್ಳ ಶುದ್ಧಕ ಸಮುದ್ರದಿಂದ ಆವೃತವಾಗಿದೆ. ಅನಂತರ ೯೦ ಲಕ್ಷ ಯೋಜನ ವಿಸ್ತೀರ್ಣವಿರುವ ಸ್ವರ್ಣಭೂಮಿ ಇದೆ. ಅದರ ನಂತರ ಸುತ್ತಲೂ ವಲಯಾಕೃತಿಯುಳ್ಳ ವಜ್ರಲೇಪವಿದೆ. ಅದರ ಹೊರಗೆ ೫೦ ಸಾವಿರ ಯೋಜನಸಹಿತವಾದ ೫೦ ಲಕ್ಷ ಯೋಜನ ವಿಸ್ತಾರವಿರುವ ಲೋಕಾಲೋಕ ಪರ್ವತವಿದೆ. ಅದು ವಲಯಾಕಾರದಲ್ಲಿದೆ. ಇದರ ಪೂರ್ವದಲ್ಲಿ ಋಷಭ, ದಕ್ಷಿಣದಲ್ಲಿ ಪುಷ್ಕರಚೂಡ, ಪಶ್ಚಿಮದಲ್ಲಿ ವಾಮನ ಹಾಗೂ ಉತ್ತರದಲ್ಲಿ ಅಪರಾಜಿತ ಎಂಬ ಹೆಸರಿನ ದಿಗ್ಗಜಗಳು ಇವೆ. ೬ ಕೋಟಿ ೯೯ ಲಕ್ಷ ಯೋಜನ ಪರಿಮಿತಿಯ ಅಂಧತಮಸ್ಸು ಇದೆ. ಅನಂತರ ಅದರ ಎರಡು ಪಟ್ಟು ಅಂದರೆ ೧೩ ಕೋಟಿ ೯೮ ಲಕ್ಷ ಪರಿಮಿತಿಯಷ್ಟು ಘನೋದಕವಿದೆ. ಆಮೇಲೆ ವೈಷ್ಣವಧಾಮವಿದೆ. ಹೀಗೆ ಮೇರುವಿನ ನಾಲ್ಕು ದಿಕ್ಕುಗಳಲ್ಲಿ ಇಪ್ಪತ್ತೈದು ಕೋಟಿ ಇದೆ.

॥ ಶ್ರೀವಾದೀಂದ್ರತೀರ್ಥ ವಿರಚಿತ ಭೂಗೋಲವರ್ಣನದಲ್ಲಿ ಮೂರನೆಯ ಅಧ್ಯಾಯವು ಮುಗಿಯಿತು ॥



## ಚತುರ್ಥೋಽಧ್ಯಾಯಃ

ಯಃ ಪ್ರವೃತ್ತಾಂ ಶ್ರುತಿಂ ಸಮ್ಯಕ್ ಶಾಸ್ತ್ರಂ ಚ ಋಷಿಭಾಷಿತಮ್ ।
ದೂಷಯೇದನಭಿಜ್ಞಾಯ ಸ ಭವೇದ್ ಬ್ರಹ್ಮಘಾತಕಃ ॥ ೧ ॥

ರವಿಚಂದ್ರಮಸೋರ್ಯಾವನ್ಮಯಾಖೈರವಭಾಸ್ಯತೇ ।
ಸಸಮುದ್ರಸರಿಚ್ಛೈಲಾ ತಾವತೀ ಪೃಥಿವೀ ಸ್ಮೃತಾ ॥ ೨ ॥

ಯಾವತ್ಪ್ರಮಾಣಾಪೃಥಿವೀ ವಿಸ್ತಾರಪರಿಮಂಡಲಾತ್ ।
ನಭಸ್ತಾತ್ಪ್ರಮಾಣಂ ವೈ ವ್ಯಾಸಮಂಡಲತೋ ದ್ವಿಜ ॥ ೩ ॥

ಸೌರಂ ಶತಸಹಸ್ರಂ ತು ಯೋಜನಾನಾಂ ನಿಶಾತರಾತ್ ।
ನಕ್ಷತ್ರಮಂಡಲಂ ಕೃತ್ಸ್ನಂ ಉಪರಿಷ್ಟಾತ್ ಪ್ರಕಾಶತೇ ॥ ೪ ॥

ದ್ವೇ ಲಕ್ಷೇ ಯೋಜನೋತ್ತರೆ ಬುಧೋ ನಕ್ಷತ್ರಮಂಡಲಾತ್ ।
ತಾವತ್ಪ್ರಮಾಣಭಾಗೇ ತು ಬುಧಸ್ಯಾಪ್ಯುಶನಾಃ ಸ್ಥಿತಃ ॥ ೫ ॥

ಅಂಗಾರಕೋಽಪಿ ಶುಕ್ರಸ್ಯ ತತ್ಪ್ರಮಾಣೆ ವ್ಯವಸ್ಥಿತಃ ।
ಲಕ್ಷದ್ವಯೋ ತು ಭೌಮಸ್ಯ ಸ್ಥಿತೋ ದೇವಪುರೋಹಿತಃ ॥ ೬ ॥

ಸೌರಿರ್ಬೃಹಸ್ಪತೇರೂರ್ಧ್ವಣ ದ್ವಿಕ್ಷೆ ಸಮವಸ್ಥಿತಃ ।
ಸಪ್ತರ್ಷಿಮಂಡಲಂ ತಸ್ಮಾತ್[1] ಲಕ್ಷಮೇಕಂ ದ್ವಿಜೋತ್ತಮ ॥ ೭ ॥

ಭೂಗೋಳವಿಚಾರಗಳ ಬಗ್ಗೆ ಪ್ರವೃತ್ತವಾದ ಶ್ರುತಿಯನ್ನು ಋಷಿಗಳಿಂದ ಉಕ್ತವಾದ ಶಾಸ್ತ್ರವನ್ನು ಸರಿಯಾಗಿ ತಿಳಿಯದೆ ಯಾವನು ದೂಷಿಸುವನೋ ಅವನು ಬ್ರಹ್ಮಘಾತಕನೇ ಸರಿ. ಸೂರ್ಯಚಂದ್ರರ ಕಿರಣಗಳಿಂದ ಎಲ್ಲಿಯವರೆಗೆ ಸಮುದ್ರಗಿರಿನದಿಗಳಿಂದೊಡಗೂಡಿದ ಈ ಪೃಥಿವಿಯು ಬೆಳಗಲ್ಪಡುತ್ತದೊ ಅಲ್ಲಿಯ ತನಕ ಇದು ಇದೆ. ಪೃಥಿವಿಯ ಪ್ರಮಾಣದಷ್ಟೇ ಆಕಾಶದ ಪ್ರಮಾಣವೂ ಇದೆ. ಈ ಭೂಮಿಯಿಂದ ಒಂದು ಲಕ್ಷ ಯೋಜನ ಎತ್ತರದಲ್ಲಿ ಸೂರ್ಯ. ಚಂದ್ರನಿಂದ ಮೂವತ್ತು ಲಕ್ಷ ಯೋಜನ ಎತ್ತರದಲ್ಲಿ ನಕ್ಷತ್ರಗಳು. ಅಲ್ಲಿಂದ

---

1 ತತಃ ಉತ್ತರಸ್ಮಾತ್ ಋಷಯಃ ಏಕಾದಶ ಲಕ್ಷಯೋಜನಾನಂತರೆ ಉಪಲಭ್ಯಂತೆ ಎಂದು ಭಾಗವತದಲ್ಲಿ ಶನಿಗ್ರಹ ಹಾಗೂ ಸಪ್ತರ್ಷಿಮಂಡಲದ ಅಂಕರವನ್ನು ಹೇಳಲಾಗಿದೆ.

- ಭಾಗವತ-೫-೨೨-೧೭

ಎರಡು ಲಕ್ಷ ಯೋಜನ ಎತ್ತರದಲ್ಲಿ ಬುಧಗ್ರಹ, ಅಲ್ಲಿಂದ ಎರಡು ಲಕ್ಷ ಯೋಜನ ಎತ್ತರದಲ್ಲಿ ಶುಕ್ರಗ್ರಹವು ಇದೆ. ಅಲ್ಲಿಂದ ಎರಡು ಲಕ್ಷ ಎತ್ತರದಲ್ಲಿ ಕುಜ, ಅಲ್ಲಿಂದ ಎರಡು ಲಕ್ಷ ಎತ್ತರ ಗುರುಗ್ರಹ, ಅಲ್ಲಿಂದ ಎರಡು ಲಕ್ಷ ಎತ್ತರದಲ್ಲಿ ಶನಿಗ್ರಹವು ಇದೆ. ಅಲ್ಲಿಂದ ಒಂದು ಲಕ್ಷ ಎತ್ತರದಲ್ಲಿ ಸಪ್ತರ್ಷಿಮಂಡಲವಿದೆ.

ಋಷಿಭ್ಯಸ್ತು ಸಹಸ್ರಾಣಾಂ ಶತಾದೂರ್ಧ್ವಂ ವ್ಯವಸ್ಥಿತಃ ।
ಮೇಢೀಭೂತಸ್ಸಮಸ್ತಸ್ಯ ಜೋತಿಷ್ಚಕ್ರಸ್ಯ ವೈಧ್ರುವಃ ॥ ೮ ॥

ಧ್ರುವಾದೂರ್ಧ್ವಂ ಮಹಲೋಕಃ ಯತ್ರ ತೇ ಕಲ್ಪವಾಸಿನಃ ।
ಏಕಯೋಜನಕೋಟಿಸ್ತು ಮಹರ್ಲೋಕೋಽಭಿಧೀಯತೇ ॥ ೯ ॥

ತ್ರಿಕೂಟಸ್ತು ಜನೋಲೋಕೋ ಯತ್ರ ತೇ ಬ್ರಹ್ಮಣಃ ಸುತಾಃ ।
ಸನಂದನಾದ್ಯಾಸ್ತಿಷ್ಠಂತಿ ಮೈತ್ರೇಯಾಮಲಚೇತಸಃ ॥ ೧೦ ॥

ಚತುರ್ಗುಣೋತ್ತರೆ ಚೋರ್ಧ್ವಂ ಜನೋಲೋಕಾತ್ ತಪಃ ಸ್ಮೃತಮ್ ।
ವೈರಾಜಾ ಯತ್ರ ತೇ ದೇವಾಃ ಸ್ಥಿತಾ ದಾಹವಿವರ್ಜಿತಾಃ ॥ ೧೧ ॥

ಷಡ್ಗುಣೇನ ತಪೋಲೋಕಾತ್ ಸತ್ಯಲೋಕೋ ವಿರಾಜಿತೇ ।
ಅಪುನರ್ಮಾರಕಾ ಯತ್ರ ಬ್ರಹ್ಮಲೋಕೋ ಹಿ ಸ ಸ್ಮೃತಃ ॥ ೧೨ ॥

ಅಂತರಿಕ್ಷಂ ತ್ವಯಾ ಪ್ರೋಕ್ತಂ ಲಕ್ಷಯೋಜನಮುಚ್ಛ್ರಿತಮ್ ।
ಅರ್ಧಕೋಟ್ಯುಚ್ಛ್ರಿತಃ ಸ್ವರ್ಗಃ ವಿಮಾನಾವಲಿಸಂಕುಲಃ ॥ ೧೩ ॥

ಭೂರ್ಭುವಃ ಸ್ವರ್ಗ ಇತ್ಯೇವ ಯೋಜನಾನಾಂ ಪ್ರವಿಸ್ತೃತೌ ।
ಮಹರ್ಜನಸ್ತಪಶ್ಚೈವ ಕ್ರಮಾದರ್ಧಾರ್ಧಯೋಜನಾ ॥ ೧೪ ॥

ಪಂಚಾಶತ್‌ಕೋಟಿವಿಸ್ತಾರೋ ಯೋಜನಾನಾಂ ಪ್ರವಿಸ್ತೃತೌ ।

॥ ಇತಿ ಶ್ರೀವಾದೀಂದ್ರವಿರಚಿತ ಭೂಗೋಲೆ ಚತುರ್ಥೋಽಧ್ಯಾಯಃ ॥

ಋಷಿಮಂಡಲದಿಂದ ಲಕ್ಷಯೋಜನಾನಂತರದಲ್ಲಿ ಜ್ಯೋತಿಶ್ಚಕ್ರಕ್ಕೆ ಮೇಢೀಸ್ತಂಭದಂತೆ ಧ್ರುಮಂಡಲವಿದೆ. ಅಲ್ಲಿಂದ ಒಂದು ಕೋಟಿ ಯೋಜನದಲ್ಲಿ ಮಹರ್ಲೋಕ, ಆಮೇಲೆ ಜನೋಲೋಕ, ತಪೋಲೋಕ, ಸತ್ಯಲೋಕ, ಆಮೇಲೆ ವೈಕುಂಠಲೋಕಗಳು ಕ್ರಮವಾಗಿ ಇವೆ. ಭೂಲೋಕದಿಂದ ೧ ಲಕ್ಷ ಯೋಜನ ಎತ್ತರದಲ್ಲಿ ಅಂತರಿಕ್ಷಲೋಕವಿದೆ. ಭೂಲೋಕದಿಂದ ೫೦ ಲಕ್ಷ ಎತ್ತರಕ್ಕೆ ಸ್ವರ್ಗಲೋಕವಿದೆ. ಸ್ವರ್ಗಲೋಕದ ಮೇಲೆ ಮಹರ್ಲೋಕವಿದೆ. ಇದು ಸಿದ್ಧರ್ಷಿಗಳಿಂದ ಕೂಡಿದೆ. ಆಮೇಲೆ ನಾನಾ ರತ್ನಗಳಿಂದ ಖಚಿತವಾದ ಜನೋಲೋಕ, ತಪೋಲೋಕ ಹೀಗೆ ಸಪ್ತ ಊರ್ಧ್ವಲೋಕಗಳಿವೆ.

॥ ಶ್ರೀವಾದೀಂದ್ರತೀರ್ಥ ವಿರಚಿತ ಭೂಗೋಲವರ್ಣನದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿಯಿತು ॥

